(2)




# ಅಚಲ

ಸಂಪುಟ 12
ಸಂಚಿಕೆ 2

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
ದ್ವೈಮಾಸಿಕ

ಮೇ 1998
ಬೆಂಗಳೂರು

ಚಂದಾ ಮತ್ತು ಲೇಖನಗಳನ್ನು
ಕಳುಹಿಸುವ ವಿಳಾಸ
ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಕ್ರಾಸ್
ವಿಜಯನಗರ ಎರಡನೇ ಹಂತ,
ಬೆಂಗಳೂರು - 40




ಬೆಲೆ
ಬಿಡಿ ಪ್ರತಿ - 5 ರೂ.
ವಾರ್ಷಿಕ ಚಂದಾ - 30 ರೂ.
ಆಜೀವ ಚಂದಾ - 250 ರೂ.
(ಸಂಸ್ಥೆಗಳಿಗೆ) - 300 ರೂ.

## ಒಳಪುಟಗಳಲ್ಲಿ

★ ಅಣ್ವಸ್ತ್ರ ತಯಾರಿಸಲು ನಿರಾಕರಿಸಿದ ವಿಜ್ಞಾನಿ : ಲೀಮೇಟ್ನರ್
-ನೇಮಿಚಂದ್ರ

★ ಪೌನಾರ್ ಆಶ್ರಮದಲ್ಲಿ ಕನ್ನಡದ ಅಕ್ಕ
-ಗೀತಾ ಡಿ.ಸಿ.

★ ಕಮಲಾದೇವಿ ಚಟ್ಟೋಪಾಧ್ಯಾಯ
-ಡಾ|| ಜ್ಯೋತ್ಸ್ನಾ ಕಾಮತ್

★ ಕ್ರಾಂತಿಮಾತೆ ಮೇಡಂ ಕಾಮಾ
-ಎನ್. ಗಾಯತ್ರಿ

★ ಪರದೆಯಲ್ಲಿದ್ದುಕೊಂಡೇ ಪ್ರಗತಿಯತ್ತ ಹೆಜ್ಜೆ
-ಹೆಚ್.ಎನ್. ಗೀತಾ

★ ಪ್ರೀತಿಯ ಅಚಲ, ನಾಟಕ ವಿಮರ್ಶೆ, ವರದಿ ಇತ್ಯಾದಿ.

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ|| ಬಿ.ಎನ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್
ಎಚ್.ಎಸ್. ಗೀತಾ

ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/= ಬ್ಯಾಂಕ್ ಕಮಿಷನ್ ಸೇರಿಸಿ ಕಳುಹಿಸಬೇಕು

ಎಂ.ಒ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸ ಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕು

## ತಿದ್ದುಪಡಿ

ಕಳೆದ ಮಾರ್ಚ್ 1998ರ ಸಂಚಿಕೆಯಲ್ಲಿ 'ಸೊರಾಬ್ಜಿ ಕಾರ್ನೇಲಿಯಾ ಕಾಮಾ'' ಎಂದು ತಪ್ಪಾಗಿ ಮುದ್ರಿತವಾಗಿದೆ. ಆ ಹೆಸರು ಸೊರಾಬ್ಜಿ ಕಾರ್ನೇಲಿಯಾ ಎಂದಷ್ಟೇ ಇರಬೇಕು. ಅದಕ್ಕಾಗಿ ವಿಷಾದಿಸುತ್ತೇವೆ. ಮೇಡಂ ರುಸ್ತುಂ ಕಾಮಾ ರವರನ್ನು ಕುರಿತ ಲೇಖನ ಈ ಸಂಚಿಕೆಯಲ್ಲಿದೆ.

-ಸಂ.

## ಅಭಿನಂದನೆ

ಕಳೆದ ಎರಡು ದಶಕಕ್ಕಿಂತ ಹೆಚ್ಚು ಕಾಲದಿಂದ ಮಹಿಳಾ ಚಳುವಳಿಯಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿ ಕೊಂಡು, ಕಾವ್ಯ, ವಿಮರ್ಶೆ, ಸಂಶೋಧನೆ, ಮಹಿಳಾ ಅಧ್ಯಯನಗಳ ಕ್ಷೇತ್ರಕ್ಕೆ ಮಹತ್ವದ ಕಾಣಿಕೆ ನೀಡುತ್ತಾ ಬಂದಿರುವ **ಡಾ|| ವಿಜಯಾದಬ್ಬೆ** ಅವರಿಗೆ 1998ರ ಸಾಲಿನ ''ಅನುಪಮಾ ಪ್ರಶಸ್ತಿ'' ಲಭಿಸಿದ್ದು ಅವರನ್ನು ಅಚಲ ಬಳಗ ಹೃತ್ಪೂರ್ವಕ ಅಭಿನಂದಿಸುತ್ತದೆ.

**ಅಚಲಕ್ಕೆ**

**ಚಂದಾದಾರರಾಗಿರಿ**

ಕಮಲಾದೇವಿ ಅದರಲ್ಲಿ ಪ್ರಮುಖರು. ದೇಶೀಯ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಚಳುವಳಿ ತೀರಾ ಸಪ್ಪಗೆ ಇದ್ದದ್ದೂ ಅವರಿಗೆ ಇಷ್ಟವಾಗಲಿಲ್ಲ. ದೇಶದ ಸ್ವಾತಂತ್ರ್ಯ ಹೋರಾಟ ಎಲ್ಲರಿಗೂ ಸೇರಿದ್ದು ಸಂಸ್ಥಾನದ ಪ್ರಜೆಗಳೂ ಅದರಲ್ಲಿ ಸೇರಿಕೊಳ್ಳಬೇಕೆಂದು ವಾದಿಸಿದರೂ ಭಿನ್ನಾಭಿಪ್ರಾಯಗಳಿಂದ ಬೇಸತ್ತು ಕೆಲಕಾಲ ದೇಶದಿಂದ ದೂರವಿರಲು ನಿರ್ಧರಿಸಿದರು.

ಈ ಹೊತ್ತಿಗೆ ಅವರ ಮದುವೆ ಮುರುಗಡೆ ಆಗಿತ್ತು. 1923ರಲ್ಲಿ ಹುಟ್ಟಿದ ಒಬ್ಬನೇ ಮಗ ರಾಮನ ಶಿಕ್ಷಣದ ವ್ಯವಸ್ಥೆ ಆಗಬೇಕಿತ್ತು. ಗಾಂಧೀಜಿ ಒಪ್ಪಿಗೆ ಪಡೆದು, ಮಗನು ಬಯಸಿದಂತೆ ರೇಡಿಯೋ ಇಂಜಿನಿಯರಿಂಗ್ ಕಲಿಸುವ ವ್ಯವಸ್ಥೆ ಮಾಡಲು ಯುರೋಪಿಗೆ ಅವನೊಂದಿಗೆ ಹೊರಟರು. (1939). ಆದರೆ ಅದಾಗಲೇ ದ್ವಿತೀಯ ಮಹಾಯುದ್ಧದ ಕಾರ್ಮೋಡಗಳು ಕವಿದಿದ್ದವು. ಯುರೋಪಿನ ಯಾವ ದೇಶವೂ ಕ್ರಾಂತಿಯ ಹಿನ್ನೆಲೆಯುಳ್ಳಾಕೆಯ ಸಂತತಿಗೆ ಸಹಾಯ ಮಾಡಲು ಒಪ್ಪಲಿಲ್ಲ. ಇವರು ಸೋಲನ್ನೊಪ್ಪದೇ ಅಲ್ಲಿಂದ ಅಮೇರಿಕೆಗೆ ತೆರಳಿದರು. ಆ ಮಹಾನ್ ದೇಶದಲ್ಲಿ ವ್ಯಕ್ತಿಸ್ವಾತಂತ್ರ್ಯ, ಔದ್ಯಮಿಕ ಪ್ರಗತಿ, ಮಹಿಳಾ ಸಂಘಟನೆಗಳನ್ನು ಪ್ರತ್ಯಕ್ಷ ಕಂಡರು. ಮಗನ ಶಿಕ್ಷಣದ ವ್ಯವಸ್ಥೆ ಆದೊಡನೆ ಅಮೇರಿಕೆಯಲ್ಲೆಲ್ಲ ಸಂಚರಿಸಿ ಭಾರತದ ಸ್ವಾತಂತ್ರ್ಯ ಹೋರಾಟದ ಪರಿಚಯವನ್ನು ಅಮೇರಿಕನ್ನರಿಗೆ ಮಾಡಿಕೊಟ್ಟರು. ಅಲ್ಲಿ ಭೇಟಿ ಮಾಡಿದ ವ್ಯಕ್ತಿಗಳಿಗೆ, ಮಾಡಿದ ಭಾಷಣಗಳಿಗೆ, ಸ್ಥಾಪಿಸಿದ ಸಂಪರ್ಕಗಳಿಗೆ ಲೆಕ್ಕವಿಲ್ಲ. ಸಂತತಿ ನಿಯಂತ್ರಣದ ಆದಿ ಪ್ರತಿಪಾದಕ ಮಾರ್ಗರೇಟ್ ಸ್ಯಾಂಗರ್, ಅಧ್ಯಕ್ಷ ರೂಸ್‌ವೆಲ್ಟ್ ಹಾಗೂ ಹೆಸರಾಂತ ಸಮಾಜಸೇವಕಿ ಅವರ ಪತ್ನಿ ಎಲೀನರ್, ಅವರಲ್ಲಿ ಪ್ರಮುಖರು. ಆಗಿನ್ನೂ ಭಾರತೀಯರು, ಅಮೇರಿಕೆಗೆ ಅಪರಿಚಿತರಾಗಿದ್ದ ಕಾಲ. ಈ ಸುಂದರ ಮಹಿಳೆಯ ಆಕರ್ಷಕ ವೇಷಭೂಷಣ ಮೋಹಕ ಮಾತುಗಾರಿಕೆಗೆ ಅಲ್ಲಿಯವರು ಮರುಳಾಗಿ ಹೋದದ್ದು, ಅಂದಿನ ಪ್ರಮುಖ ವೃತ್ತಪತ್ರಿಕೆಗಳ ಸಮಾಚಾರದಿಂದ ಗೊತ್ತಾಗುತ್ತದೆ.

ಅಲ್ಲಿಂದ ಅವರು ಚೀನ ಜಪಾನ್‌ಗಳತ್ತ ಸಾಗಿದರು. ಚೀನದಲ್ಲಿ ಯಾದವೀ ಯುದ್ಧ ನಡೆದಿತ್ತು. ಬಾಂಬ್‌ದಾಳಿಗಳ ನಡುವೆ, ಅಪರಿಚಿತ ನಾಡಿನಲ್ಲಿ, ಟ್ರೇನು, ಹಡಗುಗಳ ಅನಿಶ್ಚಿತತೆಯಲ್ಲಿ ಕೇವಲ ಸೈನಿಕರಿಂದ ತುಂಬಿದ ಬೋಗಿಯಲ್ಲಿ ಓರ್ವಳೇ ಮಹಿಳೆಯಾಗಿ ಅವರು ಸಂಚರಿಸಿದ್ದು, ಯಾರಿಗೂ ಝಲ್ಲೆನ್ನಿಸುವ ಅನುಭವ. ಭಾರತ ಹೋರಾಟ ಹಾಗೂ ಭಾರತೀಯ ನಾರಿಯರ ಕುರಿತಾದ, ದೇಶ-ವಿದೇಶಿಯರ ಅಭಿಪ್ರಾಯಗಳನ್ನೆಲ್ಲ ಪುಸ್ತಕ ರೂಪದಲ್ಲಿ ಕೊಡಮಾಡಿದ್ದಾರೆ.

1942ರಲ್ಲಿ ಕಮಲಾದೇವಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಅಧ್ಯಕ್ಷರಾದರು. ಆದರೆ ಕ್ವಿಟ್ ಇಂಡಿಯಾ ಚಳುವಳಿ ಶಿಖರಕ್ಕೇರಿದ ಕಾಲ. ಮತ್ತೆ ಆಂದೋಲನ ಕೈಬೀಸಿ ಕರೆಯಿತು. ಕೆಲಕಾಲ ಸಮ್ಮೇಳನ ಸ್ಥಗಿತ ಗೊಳಿಸುವ ನಿರ್ಧಾರ ಕೈಕೊಂಡು ರಾಷ್ಟ್ರೀಯ ಸೇವಾದಳದಲ್ಲಿ ಪೂರ್ಣತಃ ತೊಡಗಿಸಿಕೊಂಡು ಬಂಧನಕೊಳಪಟ್ಟರು. 1944ರಲ್ಲಿ ಬಿಡುಗಡೆ ಹೊಂದಿದರು. ಮತ್ತೆ ಅವರ ಚಟುವಟಿಕೆಗಳು ಪ್ರಾರಂಭವಾದವು.

1947ರಲ್ಲಿ ಸ್ವಾತಂತ್ರ್ಯವೇನೋ ಲಭಿಸಿತು. ಆದರೆ ಅದಕ್ಕೆ ಹೊಂದಿ ಲಕ್ಷಾಂತರ ನಿರಾಶ್ರಿತರ ಪುನರ್ನಿವೇಶನದ ಸಮಸ್ಯೆ ಬೃಹದಾಕಾರ ತಾಳಿತ್ತು. ಕಮಲಾದೇವಿ, ತಾವು ಸ್ಕಾಂಡಿನೇವಿಯದಲ್ಲಿ ಕಂಡ ಯಶಸ್ವಿ ಸಹಕಾರಿ ಸಂಸ್ಥೆಗಳ ಮಾದರಿಯಲ್ಲಿ ನಿರಾಶ್ರಿತ ಜನಕೋಟಿಗೆ ಮನೆಗೆ ಕೃಷಿಗೆ, ಕೈಗಾರಿಕೆಗೆ, ಮಾರಾಟಕ್ಕೆ ಅನುಕೂಲ ಮಾಡಿಕೊಡಲು, ದಿನ-ರಾತ್ರಿ ಶ್ರಮಿಸಿದರು.

ಕಾಂಗ್ರೆಸ್ಸಿನ ಮಂಚೂಣಿಯಲ್ಲಿದ್ದವರಿಗೆಲ್ಲ ಸ್ವಾತಂತ್ರ್ಯ ಪ್ರಾಪ್ತಿಯ ಬಳಿಕ ಪ್ರತಿಷ್ಠಿತ ಹುದ್ದೆಗಳು ದೊರತವು. ಚಿಕ್ಕದೊಡ್ಡ 'ತ್ಯಾಗಿ'ಗಳ ಮಹಾನ್ ಪಡೆಯೇ ಕಾಣಿಸಿಕೊಂಡು ತಮ್ಮ ಹಕ್ಕು ಬಾಧ್ಯತೆಗಳನ್ನು ಸಾಧಿಸಿಕೊಂಡಿದ್ದು ಈಗ ಇತಿಹಾಸ! ಆದರೆ ಕಮಲಾದೇವಿ, ಅವರಿಗೆ ಕೊಡಮಾಡಿದ ಮಹತ್ವದ ಹುದ್ದೆಗಳನ್ನೆಲ್ಲ ತಿರಸ್ಕರಿಸಿದರು. ಕ್ಯಾಬಿನೆಟ್ ಮಂತ್ರಿ ಪದವಿ ಧಿಕ್ಕರಿಸಿದರು. ಅವರಿಗೆ ಪ್ರಿಯವಾಗಬಹುದೆಂದು ಭಾವಿಸಿ ನೀಡಲಾದ ಈಜಿಪ್ತ್ ಸೋವಿಯಟ್ ರಷ್ಯ ದೇಶಗಳ ರಾಯಭಾರಿ ಪದವಿಯನ್ನೂ ಒಪ್ಪಿಕೊಳ್ಳಲಿಲ್ಲ. ಎಲ್ಲ ಪಕ್ಷಗಳು ಸೇರಿ ಉಪರಾಷ್ಟ್ರಪತಿಯ ಪದವಿಗೆ ಅವರ ಹೆಸರು ಸೂಚಿಸಿದಾಗಲೂ ಸಮ್ಮತಿಸಲಿಲ್ಲ. 'ಸ್ವತಂತ್ರ ಭಾರತದಲ್ಲಿ ಜನಸಾಮಾನ್ಯರಿಗಾಗಿ ಕೆಲಸ ಮಾಡಲು ಬೇಕಾದ ಸ್ವಾತಂತ್ರ್ಯ-ಅವಕಾಶಗಳು ಲಭಿಸಿವೆ! ಅವನ್ನು ಬಳಸಬಹುದು!' ಅನ್ನುತ್ತಿದ್ದರು. ಯಾವ ಪದವಿಯನ್ನು ಅಲಂಕರಿಸದೆಯೇ ಕೆಲಸ ಮಾಡಿಯೂ ತೋರಿಸಿದರು. ಅಖಿಲ ಭಾರತ ಕೈಗಾರಿಕಾ ಬೋರ್ಡು 1952ರಲ್ಲಿ ರೂಪಗೊಂಡಾಗ ಮಾತ್ರ ಅದು ತನ್ನದೇ ಮಗು ಎಂದು ಮಮತೆಯಿಂದ ಪಾಲಿಸಿ ಪೋಷಿಸಿ, ಮಣ್ಣುಮುಕ್ಕಿ ಹೋಗಲಿದ್ದ ನೂರಾರು ಕುಶಲ ಕೈಗಾರಿಕೆಗಳಿಗೆ ಪುನಶ್ಚೇತನ ನೀಡಿದರು.

ಪೈಠಣ್, ಚಂದೇರಿ ಸೀರೆಗಳು, ಅಂದಚಂದದ ನೇಕಾರಿಕೆಗೆ ಪ್ರಸಿದ್ಧವಿದ್ದವು. ಅವೆಲ್ಲ ಮಣ್ಣುಗೂಡಿ ನೇಕಾರ ಕುಟುಂಬದವರು ನೆರೆಯ ಊರು ಪಟ್ಟಣಗಳಿಗೆ ಹೋಗಿ ಸುಣ್ಣ ಬಣ್ಣ ಬಳಿದೋ, ಕೂಲಿ ಮಾಡಿಯೋ ಹೊಟ್ಟೆ ಹೊರೆಯುತ್ತಿದ್ದರೆಂದರೆ ಅವರ ನಿರ್ಗತಿಕತೆಯ ಕಲ್ಪನೆ ಬಂದೀತು! ಕಮಲಾದೇವಿ ಅಳಿದುಳಿದ ಹತ್ತಾರು ಕುಟುಂಬಗಳನ್ನು ಗುರುತಿಸಿದರು. ಸಹಾಯಧನ ಒದಗಿಸಿದರು. ಪುನಃ ಮಗ್ಗಗಳು ನಡೆಯುವಂತೆ ನೋಡಿಕೊಂಡರು. ಭಾರತದ ಹಳ್ಳಿ ಹಳ್ಳಿಗಳನ್ನು ತಿರುಗಿದರು. ಕಾಶ್ಮೀರಿ ಶಾಲು ಪೇಪರಮಾಶೆ, ಹೈದರಾಬಾದದ ಕಲಂಕಾರಿ ದಕ್ಷಿಣದ ಕಂಚು-ಹಿತ್ತಾಳೆಯ ಸಾಮಗ್ರಿ

ಬಿದರಿಕಲೆ, ಧಾರವಾಡದ ಕಸೂತಿ, ಯಾವುದೂ ಅವರ ದೃಷ್ಟಿ ತಪ್ಪಿಸಿಕೊಳ್ಳಲಿಲ್ಲ. ಕುಶಲಕರ್ಮಿಗಳ ಸ್ಥಾನಮಾನ ಏರಿಸಲು ಹವಣಿಸಿದರು. ಅವರಿಗೆ ಪೆನ್‌ಶನ್ ಕೊಡಿಸಲು ಪ್ರಯತ್ನಿಸಿದರು. ರಾಷ್ಟ್ರೀಯ ಪುರಸ್ಕಾರ-ಪ್ರಶಸ್ತಿಗಳ ಯೋಜನೆ, ಹುಟ್ಟು ಹಾಕಿದವರು ಅವರೇ !

ಇವುಗಳ ನಡುವೆ ತಮ್ಮ ಹೃದಯಕ್ಕೆ ಹತ್ತಿರವಾದ ರಂಗಪ್ರೇಮ ಮರೆತಿರಲಿಲ್ಲ. ರಂಗ ಸಜ್ಜಿಕೆಗೆ (stage-craft)ಗೆ ಬೇಕಾಗುವ ಸಕಲ ಸಾಮಗ್ರಿಗಳ ಮಳಿಗೆಗಳು ಕುಶಲಕರ ವಸ್ತುಗಳ ಜೊತೆಗೇ ಇದ್ದು ಪ್ರದರ್ಶನಗೊಳ್ಳುವ ವ್ಯವಸ್ಥೆಯ ಜೊತೆಗೆ ಸಂಗೀತ ವಾದ್ಯಗಳ ಪುನರ್ನಿರ್ಮಾಣಕ್ಕೆ ಹವಣಿಸಿದರು. ಸಾವಿನಂಚಿನಲ್ಲಿದ್ದ ಅದೆಷ್ಟೊ ಜಾನಪದ ಕೈಗಾರಿಕೆಗಳೂ, ಮರೆತು ಹೋಗಲಿದ್ದ ಕಲಾಕಾರರೂ ಬೆಳಕು ಕಾಣುವಂತಾದದ್ದು ಕಮಲಾದೇವಿಯವರ ಸ್ವಪ್ರಯತ್ನದಿಂದ. ವೃದ್ಧಾಪ್ಯದಲ್ಲೂ ನಾಟಕ ಪ್ರದರ್ಶನಗಳಿಗೆ, ಲಿಫ್ಟ್ ಇಲ್ಲದಲ್ಲಿ ನಾಲ್ಕಾರು ಮಹಡಿ ಹತ್ತಿ ಹೋಗಿ, ಪ್ರದರ್ಶನ ಮುಗಿಯುವವರೆಗೂ ಕುಳಿತುನೋಡಿ, ಆಬಳಿಕ ಕಲಾವಿದರನ್ನು ಕಂಡು, ಅಭಿನಂದಿಸಿ ಸಲಹೆಗಳನ್ನು ನೀಡುವ ರಂಗ ಪ್ರೇಮ ಅವರದಾಗಿತ್ತು' ಎಂದು ರಾಷ್ಟ್ರೀಯ ನಾಟಕಶಾಲೆಯ ಮೊದಲ ನಿರ್ದೇಶಕರೂ, ಶ್ರೇಷ್ಠ ನಾಟಕ ವಿಮರ್ಶಕರೂ ಆದ ಇಬ್ರಾಹಿಂ ಅಲ್ಕಾಯಿ ಅಭಿಮಾನದಿಂದ ಹೇಳಿದ್ದಾರೆ. 1988ರಲ್ಲಿ ಕಮಲಾದೇವಿ ಕೊನೆಯುಸಿರು ಎಳೆದರು.

ಅಚ್ಚಕನ್ನಡಿತಿಯಾಗಿ ಹುಟ್ಟಿ ಬೆಳೆದರು. ರಾಷ್ಟ್ರಮಟ್ಟದ ಧುರೀಣರಲ್ಲಿ ಒಬ್ಬರಾಗಿ ಬೆಳಗಿದರು. ಅಂತರ್‍ರಾಷ್ಟ್ರೀಯ ಮಟ್ಟದಲ್ಲಿ ಹೆಸರುವಾಸಿಯಾದರು. ಸಂಗೀತ-ನಾಟಕಗಳಲ್ಲಿ ಆಸಕ್ತರು, ಸ್ವಾತಂತ್ರ್ಯ ಯೋಧೆ, ಕಾಂಗ್ರೆಸ್ಸಿನ ಸಕ್ರಿಯ ಕಾರ್ಯಕರ್ತೆ, ಮಹಿಳಾ ಅಭ್ಯುದಯಕ್ಕಾಗಿ ಹಲವು ವಿಧದಲ್ಲಿ ದುಡಿದಾಕೆ, ಹಲವಾರು ಟ್ರೇಡ್ ಯೂನಿಯನ್‌ಗಳ ಸ್ಥಾಪಕಿ, ಸಹಕಾರಿ ಸಂಸ್ಥೆಗಳ ಸಂಘಟಕಿ, ಕುಶಲ ಕೈಗಾರಿಕೆಗಳಿಗೆ ಪುನರ್ಜನ್ಮವಿತ್ತಾಕೆ. ಉತ್ತಮ ವಾಕ್ಪಟು, ಲೇಖಕಿ. ಹನ್ನೆರಡು ಪುಸ್ತಕಗಳನ್ನು ಬರೆದಿದ್ದಾರೆ. ಅರಸಿ ಬಂದ ಹುದ್ದೆಗಳನ್ನು ಕಣ್ಣೆತ್ತಿ ನೋಡಲಿಲ್ಲ. ಆದರೆ ಪ್ರಶಸ್ತಿಗಳು ಬಿಡದೇ ಬೆನ್ನಟ್ಟಿಕೊಂಡು ಬಂದವು. ಪದ್ಮಭೂಷಣ, ದೇಶಿಕೋತ್ತಮ ಹಾಗೂ ಮ್ಯಾಗಸೇಸೇ ಪ್ರಶಸ್ತಿಗಳು ಕೆಲವು. ಯುನೆಸ್ಕೊ, ಈಜಿಪ್ಟ್, ದೇಶಗಳ ಗೌರವ ಪ್ರಶಸ್ತಿಗಳೂ ಸಂದಿವೆ. ಆದರೆ ಅವುಗಳ ಆಕರ್ಷಣೆ ಅವರಿಗೆ ಕಿಂಚಿತ್ತೂ ಇರಲಿಲ್ಲ. ತಮ್ಮ ವೈಯಕ್ತಿಕ ಕೊಂಚ ಆಸ್ತಿಯೊಂದಿಗೆ, ಮ್ಯಾಗ್‌ಸೇಸೇ ಪ್ರಶಸ್ತಿಯ ಗೌರವಧನದ ಮೊತ್ತವನ್ನೂ ಅವರು ಮಂಗಳೂರಿನ ಯು.ಎಸ್.ಎಸ್. ಟ್ರಸ್ಟ್‌ಗೆ ಕೊಡಮಾಡಿದರು. ಕೇವಲ ಹಣಕ್ಕೆ, ಪ್ರತಿಷ್ಠೆಗೆ, ಸ್ವಂತ ಪ್ರಚಾರಕ್ಕೆ, ಪ್ರಸಿದ್ಧಿಗೆ 'ಸಮಾಜ ಸೇವೆ'ಯನ್ನು ಕೈಕೊಳ್ಳುತ್ತಿರುವವರ, ಪ್ರಶಸ್ತಿಗಳಿಗೆ ಹಪಾಹಿಸುವವರ ಸಂಖ್ಯೆ ಏರುತ್ತಲೇ ಹೋಗಿರುವ ಇಂದಿನ ದಿನಗಳಲ್ಲಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಧ್ರುವತಾರೆ. ●

---

-5ನೇ ಪುಟದಿಂದ ...

ಜನವರಿ 1939ರ 'ನೇಚರ್' ಪತ್ರಿಕೆಯಲ್ಲಿ ಪ್ರಕಟವಾದ ಲೀ ಮೇಟ್ನರಳ ಪ್ರಬಂಧದೊಡನೆಯೇ ಪರಮಾಣು ಯುಗ ಆರಂಭವಾಯಿತು. ಸೆಪ್ಟೆಂಬರ್ 1, 1939, ಮೇಟ್ನರ್ ಯುರೇನಿಯಂ ವಿದಲನವನ್ನು ಕುರಿತ ತನ್ನ ಪ್ರಬಂಧವನ್ನು ಪ್ರಕಟಿಸಿದ ಕೆಲವೇ ತಿಂಗಳು, ಎರಡನೇ ಮಹಾಯುದ್ಧ ಆರಂಭವಾಯಿತು. ಥಟ್ಟನೆ ಮೇಟ್ನರ್ ಅಧ್ಯಯನ ತಿಳಿಸಿದ ಆ ಅಗಾಧ ಶಕ್ತಿಯನ್ನು ವಿಧ್ವಂಸಕ ಅಸ್ತ್ರವಾಗಿ ಪರಿವರ್ತಿಸಲು ಸ್ಪರ್ಧೆಯೇ ನಡೆಯಿತು. ಮೇಟ್ನರ್ ಅಣ್ವಸ್ತ್ರ ತಯಾರಿಸಲು ಸಿದ್ಧವಿರಲಿಲ್ಲ. ಅಮೆರಿಕೆಯ ಅಣ್ವಸ್ತ್ರ ತಯಾರಿಕೆಯ 'ಮ್ಯಾನ್‌ಹ್ಯಾಟನ್ ಯೋಜನೆ'ಯಲ್ಲಿ ಕೆಲಸ ಮಾಡಲು ಆಕೆಯನ್ನು ಆಹ್ವಾನಿಸಲಾಯಿತು. ಆದರೆ ಅಣ್ವಸ್ತ್ರ ತಯಾರಿಸಲು ಸಂಪೂರ್ಣ ನಿರಾಕರಿಸಿದ ಮೇಟ್ನರ್, ಅಣ್ವಸ್ತ್ರ ಯೋಜನೆ ಯಶಸ್ವಿಯಾಗದಿರಲಿ ಎಂದು ಮನಸಾರೆ ಆಶಿಸಿದಳು. ಅಮೆರಿಕೆಯ ಯುದ್ಧದಾಹದ ಸಂಶೋಧನೆಗಳಿಂದ ಸಂಪೂರ್ಣ ದೂರ ಉಳಿದಳು.

ಒಂದು ಕಡೆ ಜರ್ಮನಿಯಲ್ಲಿದ್ದ ಓಟೋ ಹಾನ್, ಮತ್ತೊಂದೆಡೆ ಅಮೆರಿಕೆಯಲ್ಲಿದ್ದ ಎನ್ರಿಕೋ ಫರ್ಮಿ, ಇಬ್ಬರು ಸ್ನೇಹಿತರು ಯುದ್ಧದ ಎರಡು ತಂಡದಲ್ಲಿದ್ದರು. ಮ್ಯಾನ್‌ಹ್ಯಾಟನ್ ಯೋಜನೆಯ ಫಲವಾಗಿ ಆಗಸ್ಟ್ 6, 1945, ಹಿರೋಷಿಮಾ ಮೇಲೆ ಜಗತ್ತಿನ ಪ್ರಥಮ ಅಣ್ವಸ್ತ್ರ ಸ್ಫೋಟಿಸಿತು. ತಟ್ಟನೆ ಮೇಟ್ನರ್ ಅಣ್ವಸ್ತ್ರಕ್ಕೆ ಕಾರಣವಾದ ವಿದಲನವನ್ನು ಕಂಡು ಹಿಡಿದ ಮಹತ್ವದ ವಿಜ್ಞಾನಿಯಾಗಿ ಪ್ರಸಿದ್ಧಿಯ ತುದಿಗೇರಿದಳು. ಆದರೆ ಮೇಟ್ನರ್ ತಾನೆಂದೂ ಇಂಥಾ ಅಗಾಧ ಶಕ್ತಿಯ ವಿಧ್ವಂಸಕ ಉಪಯೋಗದ ಪರ ಇಲ್ಲವೆಂದೂ, ತನ್ನ ಸಂಶೋಧನೆ ಇಂಥಾ ಯುದ್ಧದ ಸಮಯದಲ್ಲಿ ಹೊರಬಂದದ್ದು ತೀವ್ರ ವಿಷಾದದ ಸಂಗತಿಯೆಂದೂ ಸಾರಿದಳು. ಆಕೆಯ ಕೊಡುಗೆ ಇಲ್ಲದಿದ್ದರೂ ಆಕೆಯ ಸಂಶೋಧನೆಯ ಫಲಿತಾಂಶಗಳು ಪ್ರಪ್ರಥಮ ನ್ಯೂಕ್ಲಿಯರ್ ರಿಯಾಕ್ಟರ್ ಮತ್ತು ಪರಮಾಣು ಬಾಂಬಿಗೆ ಕಾರಣವಾದವು.

ಲೀ ಮೇಟ್ನರ್‌ಗೆ ಅನೇಕ ಪ್ರಶಸ್ತಿಗಳು ದೊರೆತವು. ಮ್ಯಾಕ್ಸ್ ಪ್ಲಾಂಕ್ ಪದಕ ದೊರೆಯಿತು. ಅಮೆರಿಕೆಯ ಎನ್ರಿಕೋ ಫರ್ಮಿ ಪುರಸ್ಕಾರವನ್ನು ಪಡೆದ ಮೊದಲ ಮಹಿಳೆ ಈಕೆ. ಆದರೆ 1944ರಲ್ಲಿ ಓಟೋಹಾನ್‌ಗೆ ನೋಬಲ್ ಪಾರಿತೋಷಕ ದೊರೆಯಿತು. ಸರಿಸಮಾನವಾಗಿ ದುಡಿದ, ಯುರೇನಿಯಂ ವಿದಲನವನ್ನು ವಿವರಿಸಿದ ಲೀ ಮೇಟ್ನರ್‌ಳ ಹೆಸರೇ ಇರಲಿಲ್ಲ. 1947ರಲ್ಲಿ ನಿವೃತ್ತಳಾದರೂ, ಲೀ ಮೇಟ್ನರ್ ತನ್ನ ಸಂಶೋಧನೆಯನ್ನು ಮುಂದುವರೆಸಿದಳು. 1960ರಲ್ಲಿ ಇಂಗ್ಲೆಂಡಿಗೆ ಹೋಗಿ ನೆಲೆಸಿದ ಲೀ ಮೇಟ್ನರ್ 1968ರಲ್ಲಿ ತೀರಿಕೊಂಡಳು. ●

# ಕ್ರಾಂತಿಮಾತೆ ಮೇಡಂ ಕಾಮಾ

-ಎನ್. ಗಾಯತ್ರಿ

1907ರಲ್ಲಿ ಸ್ಟುಟ್‌ಗಾರ್ಟ್‌ನಲ್ಲಿ 'ಎರಡನೇ ಅಂತರ-ರಾಷ್ಟ್ರೀಯ'ದ ಏಳನೆಯ ಸಮ್ಮೇಳನ ನಡೆಯುತ್ತಿತ್ತು. ಆ ಸಮ್ಮೇಳನ-ದಲ್ಲಿ ಭಾರತದ ಧೀರಮಹಿಳೆ ಮೇಡಂ ಕಾಮಾ ಮೊಟ್ಟಮೊದಲಿಗೆ ಭಾರತದ ತ್ರಿವರ್ಣಧ್ವಜವನ್ನು ಮೇಲೇರಿಸಿ ಸಭಿಕರನ್ನುದ್ದೇಶಿಸಿ ಸ್ಫೂರ್ತಿದಾಯಕ ಮಾತುಗಳನ್ನಾಡಿದರು- "ಸಮಾಜವಾದಿ ರಾಷ್ಟ್ರಗಳು ಒಂದು ದೇಶವು ನಿರಂಕುಶ ಪ್ರಭುತ್ವದ ದಬ್ಬಾಳಿಕೆಗೆ ಒಳಗಾಗುವುದನ್ನು ನೋಡ- ಬಯಸುವುದಿಲ್ಲ. ಅದಲ್ಲದೆ ಸಾಮ್ರಾಜ್ಯಶಾಹಿ ಆಳ್ವಿಕೆಯು ಭಾರತದ ಆಳ್ವಿಕೆಗೆ ಧಕ್ಕೆ ತರುವಂತಹುದು. ಈ ಕಾರಣಗಳಿಂದ ಪ್ರಪಂಚದ ಎಲ್ಲಾ ಸ್ವಾತಂತ್ರ್ಯ ಪ್ರೇಮಿಗಳು ಜನಸಂಖ್ಯೆಯಲ್ಲಿ 1/5 ಭಾಗವಾದ ಭಾರತೀಯರಿಗೆ ಅವರು ತಮ್ಮ ಸಂಕೋಲೆಯಿಂದ ಮುಕ್ತರಾಗಲು ನೆರವು ನೀಡಬೇಕು" ಎಂದು ಕರೆಯಿತ್ತರು.

*ವಿಶ್ವದ ನಕಾಶೆಯಲ್ಲಿ ಪ್ರಪ್ರಥಮವಾಗಿ ನಮ್ಮ ದೇಶದ ಸ್ವಾತಂತ್ರ್ಯ ಪ್ರಶ್ನೆಯನ್ನು ಪ್ರಸ್ತಾಪಿಸಿ ರಾಷ್ಟ್ರೀಯ ಧ್ವಜಾರೋಹಣವನ್ನು ಮಾಡಿದವರೊಬ್ಬರು ಮಹಿಳೆ ಮತ್ತು ಮೇಡಂ ಕಾಮಾ ಈ ಗೌರವಕ್ಕೆ ಪಾತ್ರರಾದ ಧೀರೆ.*

ಮೊದಲ ಜಾಗತಿಕ ಯುದ್ಧಕ್ಕೂ ಮುಂಚೆ ಯುರೋಪಿನಲ್ಲಿದ್ದ ಭಾರತದ ಕ್ರಾಂತಿಕಾರಿಗಳ ಸಮೂಹದಲ್ಲಿ ಮೇಡಂ ಭಿಕಾಜಿ ರುಸ್ತುಂ ಕಾಮಾ ಅತ್ಯಂತ ಪ್ರಮುಖರು. ಫ್ರಾನ್ಸಿನ ಪತ್ರಿಕೆಗಳಲ್ಲಿ ಕಾಮಾರ ವ್ಯಕ್ತಿಚಿತ್ರವನ್ನು ಜೋನ್ ಆಫ್ ಆರ್ಕ್‌ಳ ವ್ಯಕ್ತಿಚಿತ್ರದೊಂದಿಗೆ ಸಮೀಕರಿಸಿ ಪ್ರಕಟಿಸುತ್ತಿದ್ದರು. ಅಂದಿನ ಯುರೋಪಿನ ರಾಷ್ಟ್ರೀಯ-ವಾದಿ ಮತ್ತು ಪ್ರಜಾಪ್ರಭುತ್ವವಾದಿ ವಲಯಗಳಲ್ಲಿ ಮೇಡಂ ಕಾಮಾ ಒಂದು ವಿಶಿಷ್ಟಸ್ಥಾನ ಪಡೆದರು. ಭಾರತದ ಸ್ವಾತಂತ್ರ್ಯ ಹೋರಾಟ-ಗಾಥೆಯಲ್ಲಿ ಮೇಡಂ ಕಾಮಾ ನಿರಂತರವಾಗಿ ಪ್ರಜ್ವಲಿಸುವ ಮಿನುಗುತಾರೆ.

ಭಿಕಾಜಿ ರುಸ್ತುಂ ಕಾಮಾ ಶ್ರೀಮಂತ ಪಾರ್ಸಿ ಕುಟುಂಬದಲ್ಲಿ 1861ರ ಸೆಪ್ಟೆಂಬರ್ 24ರಂದು ಜನಿಸಿದರು. ತಂದೆ ಸೊರಾಬ್ಜಿ ಫ್ರೆಂಜಿ ಪಟೇಲ್ ಮತ್ತು ತಾಯಿ ಜೀಜಿ ಬಾಯಿಯವರ ಮಮತೆಯ ಕೂಸಾಗಿ ಬೆಳೆದ ಭಿಕಾಜಿ ಮುಂಬೈಯ ಅಲೆಕ್ಸಾಂಡ್ರಾ ಪಾರ್ಸಿ ಹುಡುಗಿಯರ ಶಾಲೆಯಲ್ಲಿ ತನ್ನ ಕಲಿಕೆಯನ್ನು ನಡೆಸಿದರು. ನಂತರ ಹಲವಾರು ವಿದೇಶಿ ಭಾಷೆಗಳನ್ನು ಕಾಮಾ ಕಲಿತರು. 24ರ ಹರೆಯದವರಾಗಿ-ದ್ದಾಗ ಮುಂಬೈಯ ಶ್ರೀಮಂತ ವಕೀಲರಾದ ರುಸ್ತುಂ ಕೆ.ಆರ್. ಕಾಮಾರವರನ್ನು ಮದುವೆಯಾಗಿ ಭಿಕಾಜಿ ರುಸ್ತುಂ ಕಾಮಾ ಆದರು.

ಚಿಕ್ಕ ವಯಸ್ಸಿನಿಂದಲೂ ಮೇಡಂ ಕಾಮಾರದು ನೇರ ನುಡಿ; ಸ್ಪಷ್ಟ ರಾಜಕೀಯ-ಸಾಮಾಜಿಕ ವಿಚಾರಗಳ ಅರಿವು ಮತ್ತು ಕಪಟವಿಲ್ಲದ ನಡವಳಿಕೆ. ಭಾರತದಲ್ಲಿ ಬ್ರಿಟಿಷರ ಆಳ್ವಿಕೆ ಕೊನೆಗೊಳ್ಳಬೇಕೆಂಬುದೇ ಅವರ ದೃಢ ನಿಲುವು. ಮನುಷ್ಯ-ಮನುಷ್ಯನ ನಡುವಿನ ಎಲ್ಲ ಶೋಷಣೆಗಳಿಗೂ ನಾಂದಿ ಹಾಡುವ ಸ್ವತಂತ್ರ, ಸಮೃದ್ಧ ಭಾರತದ ಕನಸು ಕಂಡಾಕೆ. ಅವರ ಪತಿಗೂ ಅವರಿಗೂ ಈ ವಿಚಾರಗಳಲ್ಲಿ ಸಾಮರಸ್ಯವಿರಲಿಲ್ಲ. ಅತ್ಯಂತ ಸಂಕುಚಿತ, ಸಾಂಪ್ರದಾಯಿಕ ಸಾಮಾಜಿಕ, ರಾಜಕೀಯ ನಂಬಿಕೆಗಳನ್ನು ಹೊಂದಿದ್ದ ಅವರ ಪತಿಗೆ ಭಾರತ ಉದ್ಧಾರವಾಗಲು ಬ್ರಿಟಿಷರ ದಕ್ಷ ಆಡಳಿತವೊಂದೇ ಪರಿಹಾರ ಎಂಬ ನಂಬಿಕೆಯಿತ್ತು. 1896ರಲ್ಲಿ ಮುಂಬೈಯಲ್ಲಿ ಪ್ಲೇಗು ಕಾಯಿಲೆಯ ದಾಳಿ ನಡೆದಾಗ ಸಾವಿರಾರು ಬಡವರು ಸಾವಿ-ಗೀಡಾದರು. ಈ ದುಃಸ್ಥಿತಿಯಿಂದ ಮನನೊಂದ ಕಾಮಾ ತನ್ನ ಸುಖದ ಸುಪ್ಪತ್ತಿಗೆಯನ್ನು ತ್ಯಜಿಸಿ ಐಷಾರಾಮದ ಜೀವನವನ್ನು ಕೊನೆಗೊಳಿಸಿ ಬಡವರ ನೆರವಿಗೆ ಬಂದರು. ಭಯಂಕರ ಸಾಂಕ್ರಾಮಿಕರೋಗದ ನಡುವಿನಲ್ಲೇ ತನ್ನ ಆರೋಗ್ಯವನ್ನು ಕಡೆಗಣಿಸಿ ರೋಗಿಗಳಿಗೆ ಸಾಂತ್ವನ ನೀಡಿ, ಶುಶ್ರೂಷೆ ನಡೆಸಿ ಅವರ ಪಾಲಿಗೆ ಫ್ಲಾರೆನ್ಸ್ ನೈಟಿಂಗೇಲ್ ಎನಿಸಿಕೊಂಡರು. ಅವರ ಈ ಸಾಮಾಜಿಕ ಸೇವೆಯ ರೀತಿನೀತಿಗಳು ಗಂಡನಿಗಾಗಲೀ, ಅವರ ಕುಟುಂಬದವರಿಗಾಗಲೀ ಇಷ್ಟವಾಗಲಿಲ್ಲ. ಸತಿ-ಪತಿಯರ ನಡುವಿನ ಕಂದಕ ದೊಡ್ಡದಾದಷ್ಟೂ ಕಾಮಾ ಸಾಮಾಜಿಕ ಕಾರ್ಯಗಳಲ್ಲಿ ತನ್ನನ್ನು ಹೆಚ್ಚು ಹೆಚ್ಚಾಗಿ ತೊಡಗಿ-ಸಿಕೊಂಡರು. ಇದೇ ಕಾರಣವಾಗಿ ಕಾಮಾ ತನ್ನ ಗಂಡನ ಸಂಬಂಧ-ವನ್ನು 1901ರಲ್ಲಿ ಕಡಿದುಕೊಳ್ಳಬೇಕಾಗಿ ಬಂತು. ಅಲ್ಲಿಂದ ಸಂಸಾರ-ಬಂಧನವನ್ನು ಕಡಿದು ಹೊರಬಂದ ಕಾಮಾರ ಬದುಕು ಬೇರೆಯದೇ ಹಾದಿ ಹಿಡಿಯಿತು. ಸಮಾಜ ಸೇವಾಕಾರ್ಯದಿಂದ ಕ್ರಾಂತಿಕಾರಿಣಿ-ಯಾಗಿ ಕಾಮಾ ರೂಪುಗೊಂಡ ಹಾದಿ ರೋಮಾಂಚಕವಾದದ್ದು.

ಮೇಡಂ ಕಾಮಾ 1901ರ ಡಿಸೆಂಬರ್‌ರಂದು ಭಾರತ ಬಿಟ್ಟು ಇಂಗ್ಲೆಂಡಿಗೆ ತೆರಳಿದರು. 1902ರಿಂದ 1907ರವರೆಗೂ ಇಂಗ್ಲೆಂಡಿನಲ್ಲಿ ಕಾಮಾ ಅತ್ಯಂತ ಕ್ರಿಯಾಶೀಲವಾಗಿ ಭಾರತದ ಬಿಡುಗಡೆಯ ಕನಸಿಗಾಗಿ ಹೋರಾಟ ನಡೆಸಿದರು. ಇಂಗ್ಲೆಂಡಿನಲ್ಲಿ ಕಾಮಾ ಮೊದಲಿಗೆ ಸುಧಾರಣಾವಾದಿ ನಾಯಕರಾಗಿದ್ದ ದಾದಾಭಾಯಿ ನವರೋಜಿ-ಯವರ ನೇತೃತ್ವದಲ್ಲಿ ತಮ್ಮ ರಾಜಕೀಯ ಚಟುವಟಿಕೆಯನ್ನು ಆರಿಸಿಕೊಂಡರು. ಇಂಗ್ಲೆಂಡಿನ ಜನತೆಗೆ ಕಾಂಗ್ರೆಸ್‌ನ ನೀತಿ, ಚಟುವಟಿಕೆಗಳನ್ನು ವಿವರಿಸಿ ಮನವರಿಕೆ ಮಾಡಿಕೊಡಲು ಪ್ರಯತ್ನಿಸಿ-ದರು. ಅವರು ಹೋರಾಟದ ವ್ಯಾಪ್ತಿಯಲ್ಲಿ ಆಳವಾಗಿ ತೊಡಗಿ-ಕೊಳ್ಳುತ್ತಿದ್ದಂತೆ ಭಾರತದ ಸ್ವಾತಂತ್ರ್ಯ ಹೋರಾಟ ವಿಶ್ವದಲ್ಲಿ ನಡೆಯುತ್ತಿರುವ ವಿವಿಧ ಸಾಮಾಜ್ಯಶಾಹಿ ವಿರೋಧಿ ಹೋರಾಟಗಳಲ್ಲಿ ಒಂದು ಎಂಬುದನ್ನು ಮನಗಂಡರು. ಕಾಂಗ್ರೆಸ್ ಪಕ್ಷದೊಳಗೇ

ಕಂಡುಬಂದ ವಿವಿಧ ಅಭಿಪ್ರಾಯ ಬೇಧಗಳ ಹಿನ್ನೆಲೆಯಲ್ಲಿ ಕಾಮಾ ತೀವ್ರಗಾಮಿಗಳಾದ ಬಾಲಗಂಗಾಧರ ತಿಲಕ್, ಬಿಪಿನ್‌ಚಂದ್ರಪಾಲ್ ಮತ್ತು ಲಾಲಾ ಲಜಪತ್‌ರಾಯ್ -ಮುಂತಾದವರನ್ನು ಬೆಂಬಲಿಸಿ-ದರು. ಅಷ್ಟೇ ಅಲ್ಲ, 'ಮನವಿ ಮಂಡಿಸುವ' ರಾಜಕೀಯದಿಂದ ದೂರಸರಿದು ಕ್ರಾಂತಿಕಾರಿಗಳ ಮಾರ್ಗವನ್ನು ಆರಿಸಿಕೊಂಡರು. ಕ್ರಾಂತಿಕಾರಿ ಮನೋಭಾವದ ಶ್ಯಾಮ್‌ಜಿ ಕೃಷ್ಣವರ್ಮ ಮತ್ತು ರಾಣಾಜಿಯವರ ಸಹವರ್ತಿಗಳಾಗಿ ಕೆಲಸ ಮಾಡಿದರು.

*ಅಂತರ ರಾಷ್ಟ್ರೀಯ ನೆಲೆಯಲ್ಲಿ ಸಾಮ್ರಾಜ್ಯಶಾಹಿ ವಿರೋಧಿ ಚಳುವಳಿಯನ್ನು ಕಟ್ಟಬೇಕೆಂಬ ಅದಮ್ಯ ಸಂಕಲ್ಪ ಕಾಮಾ-ರವರಿಗೆ ಇದ್ದುದರಿಂದಲೇ ಭಾರತದ ಸ್ವಾತಂತ್ರ್ಯ ಚಳುವಳಿ-ಗಿಂತಲೂ ಹೆಚ್ಚಿಗೆ ಸಾರ್ವತ್ರಿಕತೆಯನ್ನು ಗ್ರಹಿಸುವ ಶಕ್ತಿ ಅವರಿಗೆ ಸಾಧ್ಯವಾಯಿತು. ಆದ್ದರಿಂದಲೇ ಫ್ರಾನ್ಸಿನ ಸೋಷಿಯಲ್ ಡೆಮಾಕ್ರಟಿಕ್ ಪಕ್ಷ ಅವರನ್ನು ಕೈಬೀಸಿ ಕರೆಯಿತು. ನಂತರ ಮಾರ್ಕ್ಸ್‌ವಾದ ಅವರನ್ನು ಆಕರ್ಷಿಸಿತು. ಸ್ಟುಟ್‌ಗಾರ್ಡ್‌ನ ಎರಡನೇ ಅಂತರರಾಷ್ಟ್ರೀಯ ಸಮಾವೇಶದ ನಂತರ ಕಾಮಾ ಲೆನಿನ್‌ರ ಆರಾಧಕರಾದರು.*

ಲಂಡನ್‌ನಲ್ಲಿ ಕಾರ್ಯಪ್ರವೃತ್ತರಾಗಿದ್ದ ತ್ರಿಮೂರ್ತಿಗಳಿಗೆ ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ಪ್ರಮುಖ ಸ್ಥಾನವಿದೆ. ಇವರು ವಿದೇಶಗಳಲ್ಲಿದ್ದುಕೊಂಡೇ ಹಲವಾರು ಕ್ರಾಂತಿಕಾರಿಗಳನ್ನು ತಯಾರು ಮಾಡಿ ಭಾರತದಲ್ಲಿ ಕ್ರಾಂತಿ ಮಾಡಲು ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುತ್ತಿದ್ದರು. ಪಂಡಿತ ಕೃಷ್ಣವರ್ಮ ಸಂಪಾದಿಸುತ್ತಿದ್ದ 'ದಿ ಇಂಡಿಯನ್ ಸೋಷಿಯಾಲಜಿಸ್ಟ್' ಪತ್ರಿಕೆಯು ಯುರೋಪಿನಲ್ಲಿದ್ದ ಪ್ರಗತಿಪರರನ್ನು, ಬುದ್ಧಿಜೀವಿಗಳನ್ನು ಒಂದು-ಗೂಡಿಸುವ, ಭಾರತದ ಸ್ಥಿತಿಯ ಬಗ್ಗೆ ಕಣ್ಣು ತೆರೆಸುವ ಕೆಲಸ ಮಾಡಿತು. ರಾಣಾಜಿ ಮತ್ತು ಮೇಡಂ ಕಾಮಾ ಈ ಪತ್ರಿಕೆಗೆ ನಿಯತವಾಗಿ ಲೇಖನಗಳನ್ನು ಬರೆಯುತ್ತಿದ್ದರು.

ಕೃಷ್ಣವರ್ಮ 1905ರಲ್ಲಿ 'ಇಂಡಿಯನ್ ಹೋಮ್‌ರೂಲ್ ಸೊಸೈಟಿ'ಯನ್ನು ಇಂಗ್ಲೆಂಡಿನಲ್ಲಿ ಸ್ಥಾಪಿಸಿದಾಗ ಮೇಡಂ ಕಾಮಾ ಅದರ ಸ್ಥಾಪನೆಯ ಕಾರ್ಯದಲ್ಲಿ ನೆರವಾಗಲು, ಮುಂದಾದರು. ಮೊದಲಬಾರಿಗೆ 1857ರ ಭಾರತದ ಮೊದಲ ಸ್ವಾತಂತ್ರ್ಯ ಸಮರದ ವಾರ್ಷಿಕೋತ್ಸವವನ್ನು 1905ರಲ್ಲಿ ಆಚರಿಸಿದಾಗ ಮೇಡಂ ಕಾಮಾ ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

1905ರಿಂದ 1911ರ ಅವಧಿಯಲ್ಲಿ ಭಾರತದಲ್ಲಿ ಕ್ರಾಂತಿಕಾರಿ ಚಟುವಟಿಕೆಗಳು ತೀವ್ರವಾಗಿ ಸಾಗಿದ್ದವು. ಬಂಗಾಳ ಮತ್ತು ಪಂಜಾಬ್‌ನಲ್ಲಿ ತೀವ್ರ ಸ್ವರೂಪದ ದಂಗೆ, ಅಶಾಂತಿ ನೆಲೆಸಿದ್ದವು. ಬ್ರಿಟಿಷರ ದೌರ್ಜನ್ಯಕ್ಕೆ ರೋಸಿದ ಜನ ಶಸ್ತ್ರಾಸ್ತ್ರಗಳನ್ನು ಕೈಗೆತ್ತಿ-ಕೊಂಡರು. ಪಿಸ್ತೂಲು ಮತ್ತು ಗುಂಡುಗಳಲ್ಲಿ ಬ್ರಿಟಿಷರಿಗೆ ಉತ್ತರಿಸಲು ಪ್ರಯತ್ನಿಸಿದರು. ಭಾರತದ ಕ್ರಾಂತಿ ಚಳುವಳಿಗೆ ಇದ್ದ ಕೊರತೆಯೆಂದರೆ ಶಸ್ತ್ರಾಸ್ತ್ರಗಳ ಕೊರತೆ. ಇದರ ಸಂಪೂರ್ಣ ಅರಿವಿದ್ದ ಕಾಮಾ ಭಾರತದ ಸೋದರರಿಗೆ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುತ್ತಿದ್ದರು. ಆಟಿಕೆಗಳೊಳಗೆ ರಿವಾಲ್ವರ್‌ಗಳನ್ನು ಬಚ್ಚಿಟ್ಟು ಕಳುಹಿಸುತ್ತಿದ್ದರು. ಶಸ್ತ್ರಾಸ್ತ್ರ ಯುದ್ಧಗಳಲ್ಲಿ ನಂಬಿಕೆಯಿಟ್ಟ "ಅಭಿನವ ಭಾರತ' ಸಂಸ್ಥೆಯ ಸಕ್ರಿಯ ಸದಸ್ಯೆಯಾಗಿ ಕಾಮಾ ಕೆಲಸ ಮಾಡಿದರು. ಈ ಸಂಘಟನೆಯಲ್ಲಿ ತಮಗಿರುವ ಶ್ರದ್ಧೆ ಮತ್ತು ಸಂಕಲ್ಪವನ್ನು ಸಮರ್ಥಿಸಿಕೊಳ್ಳುತ್ತಿದ್ದರು: "ನನ್ನ ಹೋರಾಟದ ವಿಧಾನವನ್ನು ಕುರಿತು ನಾನು ಬಹಿರಂಗವಾಗಿ ಮಾತನಾಡುತ್ತೇನೆ. ನನ್ನ ದೇಶದಲ್ಲಿ, ನನ್ನ ಜನರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ, ದೌರ್ಜನ್ಯಗಳನ್ನು ನೋಡಿಯೂ ಸಹಿಸಿಕೊಂಡು ಸುಮ್ಮನೆ ಕೂರಲು ಸಾಧ್ಯವಿಲ್ಲ.... ನಾನು ಹೆಂಗಸಾಗಿ ಹಿಂಸೆಯನ್ನು ವಿರೋಧಿಸಬೇಕೆಂದು ನೀವು ಕೆಲವರು ಭಾವಿಸಬಹುದು. ಆದರೆ ವಿಮೋಚನೆಗೂ ಒಂದಷ್ಟು ಬೆಲೆಯಿದೆಯಲ್ಲವೇ? ಯಾವ ದೇಶ ತನ್ನ ಬೆಲೆ ತೆರದೆ ವಿಮೋಚನೆಯನ್ನು ಪಡೆದಿದೆ ?..... ನನ್ನ ಜೀವನದ ಏಕೈಕ ಆಸೆಯೆಂದರೆ, ಆದಷ್ಟು ಬೇಗ ಭಾರತ ಸ್ವತಂತ್ರವಾಗಬೇಕು. 'ಭಾರತ ಭಾರತೀಯರಿಗೆ ಮಾತ್ರ' ಎಂಬುದು ನಮ್ಮ ಮಂತ್ರವಾಗಲಿ. ಸ್ವರಾಜ್ಯದ ನಿಜವಾದ ಅರ್ಥ ನನಗೆ ಸಿಗುವಂತಾಗಲಿ. ಅದಕ್ಕಾಗಿ ಹೋರಾಡೋಣ."

ಕಾಮಾರವರ ಈ ಪ್ರಣಾಳಿಕೆ ಸ್ವತಂತ್ರ ಭಾರತದ ಬಗ್ಗೆ ಅವರಿಗಿದ್ದ ಸ್ಪಷ್ಟ ತಿಳುವಳಿಕೆಯನ್ನು ತೋರಿಸುತ್ತದೆ. ಇದಾದ ನಂತರ ಕೆಲವೇ ಸಮಯದಲ್ಲಿ ಮೇಡಂ ಕಾಮಾರವರ ಮಾತುಗಳು ಕೃತಿಗಿಳಿದವು. ಸರಣಿಯಲ್ಲಿ ಕ್ರಾಂತಿಕಾರಿ ಚಟುವಟಿಕೆಗಳು ಭಾರತದಲ್ಲಿ ನಡೆದವು. ಮೇ 15ರಂದು 1908ರಲ್ಲಿ ಕಲ್ಕತ್ತೆಯ ಗ್ರೇ ಸ್ಟ್ರೀಟ್‌ನಲ್ಲಿ ಬಾಂಬ್ ಸ್ಫೋಟವಾಯಿತು. ಅದೇ ವರ್ಷ ಜೂನ್‌ನಿಂದ ಡಿಸೆಂಬರ್ ತಿಂಗಳೊಳಗೆ ಕಲ್ಕತ್ತೆಯೊಂದರಲ್ಲೇ ನಾಲ್ಕು ಬಾಂಬ್ ಸ್ಫೋಟದ ಪ್ರಕರಣಗಳು ನಡೆದವು.

**ಬ್ರಿಟಿಷರ ಕೆಂಗಣ್ಣಿಗೆ ನೇರಬಲಿ**

1907ರಲ್ಲಿ ಬ್ರಿಟಿಷ್ ಸರ್ಕಾರವು ಪ್ರಥಮ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ವಾರ್ಷಿಕೋತ್ಸವವನ್ನು ಆಚರಿಸಲು ನಿರ್ಧರಿಸಿತು. ಈ ಘಟನೆಯನ್ನು 'ವಿಫಲ ಸಿಪಾಯಿದಂಗೆ'ಯೆಂದು ಕರೆಯುವುದು ಬ್ರಿಟಿಷರ ಈ ಉತ್ಸವದ ಮುಖ್ಯ ಧೋರಣೆಯಾಗಿತ್ತು. ಲಂಡನ್ನಿನಲ್ಲಿದ್ದ ಭಾರತೀಯ ಕ್ರಾಂತಿಕಾರಿಗಳು ಬ್ರಿಟಿಷರ ಈ

ಪ್ರಯತ್ನವನ್ನು ವಿರೋಧಿಸಿ ಅವರ ಉದ್ದೇಶವು ವಿಫಲಗೊಳ್ಳಲು ಶ್ರಮಿಸಿದರು. ಮೇಡಂ ಕಾಮಾರವರ ನೇತೃತ್ವದಲ್ಲಿ ಯುವ ಕ್ರಾಂತಿ-ಕಾರಿಗಳೆಲ್ಲಾ ಸೇರಿ ಮೈನವಿರೇಳಿಸುವ ಕ್ರಾಂತಿಕಾರಿ ಕರಪತ್ರಗಳನ್ನು ಬರೆದು ಹಂಚಿದರು. ಮೇಡಂ ಕಾಮಾ ಬರೆದಿದ್ದ ಈ ಕರಪತ್ರವು ಬ್ರಿಟಿಷರನ್ನು ರೊಚ್ಚಿಗೇಳಿಸುವಂತಿತ್ತು: ''ಹೇ ಹುತಾತ್ಮ ಬಂಧುಗಳೇ ಮೇ 10, ಇದೇ ದಿನ 1857ರ ಸ್ಮರಣೀಯ ವರ್ಷದಲ್ಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ಪ್ರಥಮವಾಗಿ ನೀವು ಆರಂಭಿಸಿದಿರಿ. 1857ರ ಅತೃಪ್ತ ಆತ್ಮಗಳೇ! ಇಂದಿಗೆ ಐವತ್ತು ವರ್ಷಗಳು ಸಂದಿವೆ. ಆದರೆ ಈ ವಜ್ರ ಮಹೋತ್ಸವದಂದು ನೀವು ಅಂದು ಕಂಡ ಕನಸು ವಿಫಲವಾಗದೆ ಮೂರ್ತೀಭವಿಸುತ್ತದೆಂದು ನಾವು ಪ್ರತಿಜ್ಞೆ ಮಾಡುತ್ತೇವೆ.....'' ಈ ಕ್ರಾಂತಿಕಾರಿ ಕರಪತ್ರವನ್ನು ಭಾರತದ ಉದ್ದಗಲಕ್ಕೂ ಪ್ರಸಾರಗೊಳ್ಳುವಂತೆ ಮಾಡಲಾಯಿತು. ಎಲ್ಲಾ ಪ್ರಮುಖ ಪತ್ರಿಕೆಗಳೂ ಈ ಪತ್ರವನ್ನು ಪ್ರಕಟಿಸಿದವು. ಇದರ ಪರಿಣಾಮವಾಗಿ ಕೂಡಲೇ ಭಾರತದಲ್ಲಿ ಲಾಲಾ ಲಜಪತ್‌ರಾಯ್ ಮತ್ತು ಸರ್ದಾರ್ ಅಜಿತ್‌ಸಿಂಗ್‌ರನ್ನು ಬಂಧನಕ್ಕೊಳಪಡಿಸಿದರು. ಬ್ರಿಟಿಷರ ಈ ಕೃತ್ಯವನ್ನು ಖಂಡಿಸಿ ಲಂಡನ್ ಮತ್ತು ಪ್ಯಾರಿಸ್‌ನಲ್ಲಿ ಪ್ರತಿಭಟನೆಗಳು ವ್ಯಾಪಕವಾಗಿ ನಡೆದವು. ಇವುಗಳ ನೇತೃತ್ವವನ್ನು ಮೇಡಂ ಕಾಮಾ ಮತ್ತು ಅವರ ಸಂಗಡಿಗರು ವಹಿಸಿದ್ದರಿಂದ ಬ್ರಿಟಿಷರ ಕೆಂಗಣ್ಣಿಗೆ ಇವರು ನೇರ ಗುರಿಯಾದರು. ಈ ಘಟನೆಯ ನಂತರ 1935ರಲ್ಲಿ ಭಾರತಕ್ಕೆ ಬರುವವರೆಗೂ ಮೇಡಂ ಕಾಮಾ ಪ್ಯಾರಿಸ್ಸಿಗೆ ತೆರಳಿ ಅಲ್ಲಿಂದಲೇ ತಮ್ಮ ಕ್ರಾಂತಿಕಾರಿ ಚಟುವಟಿಕೆಗಳನ್ನು ಆರಂಭಿಸಿದರು.

### ಅಂತರರಾಷ್ಟ್ರೀಯ ನೆಲೆಯಲ್ಲಿ

1907ರ ನಂತರ ಕಾಮಾ ತಮ್ಮ ಕ್ರಾಂತಿಕಾರಿ ಚಟುವಟಿಕೆಯನ್ನು ಪ್ಯಾರಿಸಿನಲ್ಲಿ ಬಿರುಸಿನಿಂದ ಆರಂಭಿಸಿದರು. ಇಲ್ಲಿ ಅದು ತನ್ನ ಸ್ವರೂಪವನ್ನೇ ಬದಲಾಯಿಸಿಕೊಂಡಿತು. ಇಡೀ ವಿಶ್ವದಲ್ಲಿ ನಡೆಯು-ತ್ತಿದ್ದ ಸಾಮಾಜಿಕ ಚಳುವಳಿಗಳು ಅವರ ಗಮನ ಸೆಳೆದವು. ವಿಶ್ವದ ಇತರ ಭಾಗಗಳಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ವಿಮೋಚನಾ ಚಳುವಳಿಗಳು, ಸಾಮ್ರಾಜ್ಯಶಾಹಿ ಮತ್ತು ವಿಶ್ವವ್ಯಾಪಿಯಾಗಿದ್ದ ಸಮಾಜವಾದಿ ಚಳುವಳಿಗಳನ್ನು ಕುರಿತು ಅವರ ದೃಷ್ಟಿಕೋನ ವಿಸ್ತಾರವಾಯಿತು. ಆದ್ದರಿಂದ ಅವರ ಗಮನ ಕೇವಲ ಭಾರತದ ಸ್ವಾತಂತ್ರ್ಯ ಚಳುವಳಿಗಷ್ಟೇ ಸೀಮಿತವಾಗಲಿಲ್ಲ. ಟರ್ಕಿ, ಈಜಿಪ್ಟ್, ಐರ್ಲೆಂಡ್, ಮೊರಾಕೋ ಮುಂತಾದ ರಾಷ್ಟ್ರಗಳ ವಿಮೋಚನಾ ಹೋರಾಟಗಳತ್ತಲೂ ಆಸಕ್ತಿ ವಹಿಸಿದರು. ಈ ಹೋರಾಟಗಳು ಪರಸ್ಪರ ಸಂಬಂಧ ಹೊಂದಿರಬೇಕೆಂದು ಬಯಸಿದರು. ಇವೆಲ್ಲದರಿಂದ ಹೊಸದೊಂದು ಜಾಗತಿಕ ದೃಷ್ಟಿಕೋನವನ್ನು ಬೆಳೆಸಿಕೊಂಡರು.

1907ರ ಆಗಸ್ಟ್ ಸ್ಟುಟ್‌ಗಾರ್ಟ್‌ನಲ್ಲಿ ನಡೆದ ಸೋಷಿಯಲಿಸ್ಟ್ ಅಂತರರಾಷ್ಟ್ರೀಯ ಸಮಾವೇಶದಲ್ಲಿ ಮೇಡಂ ಕಾಮಾ, ರಾಣಾಜಿಯವರೊಂದಿಗೆ ಭಾಗವಹಿಸಿದುದು ಮಹತ್ವದ ಘಟನೆ, 1907ರ ಆಗಸ್ಟ್ 18ರಂದು ನಡೆದ ಈ ಸಮಾವೇಶದಲ್ಲಿ ಆಗಸ್ಟ್ ಬೆಬೆಲ್, ರೋಸಾ ಲಕ್ಸೆಂಬರ್ಗ್, ಹೈಂಡ್‌ಮನ್, ಲೆನಿನ್ ಮುಂತಾದವರು ಭಾಗವಹಿಸಿದ್ದರು. ಈ ಸಂದರ್ಭದಲ್ಲೇ ಕಾಮಾ ಭಾರತದ ಧ್ವಜವನ್ನು ಹಾರಿಸಿ ಇಂಗ್ಲೀಷಿನಲ್ಲಿ ಒಂದು ನಿರ್ಣಯವನ್ನು ಮಂಡಿಸಿದರು. ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವು ಸಿಕ್ಕಬೇಕು ಎಂದು ತಮ್ಮ ನಿರ್ಣಯದಲ್ಲಿ ಹೇಳಿದ ಕಾಮಾ ಅಲ್ಲಿ ನೆರೆದ ವಿಶ್ವದ ವಿವಿಧ ದೇಶಗಳ ಪ್ರತಿನಿಧಿಗಳಲ್ಲಿ ಅರಿಕೆ ಮಾಡಿಕೊಂಡರು: ''ಭಾರತ-ದಲ್ಲಿ ಬ್ರಿಟಿಷರ ಆಡಳಿತ ಹೆಚ್ಚುಕಾಲ ಮುಂದುವರಿದರೆ ಭಾರತೀಯರ ಬದುಕು ಅತ್ಯಂತ ದುರ್ಭರವೂ ಅಸಹನೀಯವೂ ಆಗುತ್ತದೆ. ವಿಶ್ವದ ಎಲ್ಲೆಲ್ಲೂ ಇರುವ ಸ್ವಾತಂತ್ರ್ಯ ಪ್ರೇಮಿಗಳೇ ಭಾರತೀಯರ ದಾಸ್ಯವನ್ನು ಕಳೆಯಲು ನಮ್ಮೊಡನೆ ದನಿಗೂಡಿಸಿ.''

ರಷ್ಯಾದಲ್ಲಿ ನಡೆಯುತ್ತಿದ್ದ ಕ್ರಾಂತಿಯ ಬಗ್ಗೆ ಕಾಮಾ ವಿಶೇಷವಾಗಿ ಆಸಕ್ತಿವಹಿಸಿದ್ದರು. ರಷ್ಯಾದಿಂದ ಗಡೀಪಾರಾಗಿ ಪ್ಯಾರಿಸ್‌ನಲ್ಲಿ ವಾಸ-ವಾಗಿದ್ದ ಮಿಖೈಲ್ ಪಾವ್‌ಲೋವಿಚ್‌ನೊಂದಿಗೆ ನಿಕಟ ಸಂಬಂಧ ಹೊಂದಿದ್ದ ಕಾಮಾ ರಷ್ಯಾದ ಸಾಹಿತ್ಯವನ್ನು ಕುರಿತು ವಿಶೇಷವಾಗಿ ಗಾರ್ಕಿಯ ಸಾಹಿತ್ಯವನ್ನು ಅಧ್ಯಯನ ನಡೆಸಿದ್ದರು. ಮ್ಯಾಕ್ಸಿಂ ಗಾರ್ಕಿಯೊಂದಿಗೆ ಪತ್ರ ವ್ಯವಹಾರವಿರಿಸಿಕೊಂಡದ್ದೂ ಉಂಟು.

ಮೇಡಂ ಕಾಮಾ ಪತ್ರಕರ್ತೆಯಾಗಿಯೂ ಕೆಲಸ ಮಾಡಿದ್ದಿದೆ. ಅವರು ಪ್ಯಾರಿಸಿನಲ್ಲಿದ್ದಾಗ 'ವಂದೇ ಮಾತರಂ' ಎಂಬ ಇಂಗ್ಲಿಷ್ ಪತ್ರಿಕೆಯನ್ನು ಆರಂಭಿಸಿದರು. ಸುಮಾರು 9 ವರ್ಷಗಳ ಕಾಲ ನಡೆದ ಈ ಪತ್ರಿಕೆಯಲ್ಲಿ ಮುಖ್ಯವಾಗಿ ಕಾಮಾ ಬ್ರಿಟಿಷ್ ಆಡಳಿತವನ್ನು ವಿರೋಧಿಸಿ ಅವರು ಭಾರತವನ್ನು ಬಿಟ್ಟು ತೊಲಗಬೇಕು ಎಂಬುದನ್ನು ಪ್ರತಿಪಾದಿಸಿದರು. ಅಲ್ಪಕಾಲದವರೆಗೆ ಹೊರಬಂದ 'ತಲ್ವಾರ್' ಎಂಬ ಕ್ರಾಂತಿಕಾರಿ ಪತ್ರಿಕೆಯೊಂದಿಗೂ ಸಂಬಂಧವಿರಿಸಿಕೊಂಡಿದ್ದರು. ''ಅಭಿನವ ಭಾರತ' ಕ್ರಾಂತಿಕಾರಿ ಸಂಘಟನೆಯ ಮುಖವಾಣಿಯಾದ ಈ ಪತ್ರಿಕೆಯು ಪ್ರಧಾನ ಸಂಪಾದಕರಾದ ವೀರೇಂದ್ರನಾಥ ಚಟ್ಟೋಪಾಧ್ಯಾಯರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿತ್ತು. ಕೃಷ್ಣವರ್ಮ ಸಂಪಾದಿಸುತ್ತಿದ್ದ 'ದಿ ಇಂಡಿಯನ್ ಸೋಷಿಯಲಿಸ್ಟ್' ನಲ್ಲಿ ನಿಯತವಾಗಿ ಲೇಖನಗಳನ್ನು ಬರೆಯುತ್ತಿದ್ದರು.

ಬದುಕಿನ ಮಹತ್ವದ ದಿನಗಳನ್ನು ವಿದೇಶದಲ್ಲಿದ್ದುಕೊಂಡೇ ಹೋರಾಟದಲ್ಲಿ ಕಳೆದ ಕಾಮಾ ಬದುಕಿನ ಸಂಧ್ಯೆಯಲ್ಲಿ ಭಾರತಕ್ಕೆ

***21ನೇ ಪುಟದಲ್ಲಿ ಮುಂದುವರೆದಿದೆ-***

## ಪ್ರೀತಿಯ ಅಚಲಾ

'ಗ್ಲೋಬಲೈಜೇಷನ್' ಹೆಸರಿನಲ್ಲಿ ಇಂದು ಏನೆಲ್ಲಾ ನಡೆಯುತ್ತಿದೆ. ರಾಜಕೀಯ, ವಿಜ್ಞಾನ, ವಾಣಿಜ್ಯ ವ್ಯವಹಾರ ಎಲ್ಲವೂ ಇದರಿಂದ ಕೊಡುವ-ಕೊಳ್ಳುವ ವಿನಿಮಯ ಮಾಡುತ್ತಿದೆ. ಇದರ ಜೊತೆಜೊತೆಗೇ ನಮ್ಮ ಚಿಂತನೆಯ ಬೇಲಿ ವಿಸ್ತಾರಗೊಳ್ಳುತ್ತಿದೆ. ಇವೆಲ್ಲ ಜ್ಞಾನಪಡೆದ ನಂತರವೂ ಇಡೀ ವಿಶ್ವದಲ್ಲಿ ಮಹಿಳೆಯರ ಸ್ಥಿತಿ-ಗತಿ, ಸ್ಥಾನ-ಮಾನದ ಬಗ್ಗೆ ಪ್ರಶ್ನೆ ಎತ್ತಿದಾಗ ಉತ್ತರ ಭಯಂಕರವಾಗಿರುತ್ತದೆ. ಎಲ್ಲ ದೇಶಗಳಲ್ಲೂ ಪ್ರಾಶಸ್ತ್ಯಗಳ ಪಟ್ಟಿಯಲ್ಲಿ ಹೆಣ್ಣಿಗೆ ಕಡೆಯ ಸ್ಥಾನವೇ! ಉದಾಹರಣೆಗೆ ನಮ್ಮ ಸನಿಹದಲ್ಲೇ ಇರುವ ಶ್ರೀಲಂಕಾದಲ್ಲಿ ನೋಡಿ! ಆಹಾರ ಪದಾರ್ಥಗಳು, ಹಣ್ಣು ತರಕಾರಿಗಳು, ಔಷಧಿಗಳಿಗಿಂತಲೂ ಮದ್ದುಗುಂಡುಗಳಿಗೂ, ಅದನ್ನುಪಯೋಗಿಸುತ್ತಿರುವ ಸೈನ್ಯಕ್ಕೂ ಹೆಚ್ಚು ಹಣ ಖರ್ಚಾಗುತ್ತಿರುವ ಈ ನೆಲದ ಮಹಿಳೆಯರ ಸ್ಥಿತಿ ಇಂದು ಯಾವ ನೆಲೆ ತಲುಪಿದೆ ಗೊತ್ತಿದೆಯೇನು? ಪ್ರತಿಮನೆಯಲ್ಲಿಯೂ ತಂದೆ, ಗಂಡ, ಅಣ್ಣ, ತಮ್ಮ, ಮಗ ಹೀಗೆ, ದುಡಿಯುವ, ಆಶ್ರಯದಾತ-ನೆನ್ನುವ ಪುರುಷ ಶಕ್ತಿಯನ್ನು ಸೈನ್ಯಕ್ಕೆ ಎರವು ಕೊಟ್ಟು, ಅವರ ಪತ್ತೆಯನ್ನೇ ಅರಿಯದೆ, ಇತ್ತ ಸಾವಿನ ಸುದ್ದಿಯೂ ತಿಳಿಯದೆ, ಅತ್ತ ಬದುಕಿರುವ ಬಗ್ಗೆ ಯಾವ ಸಂದೇಶಗಳೂ ಇಲ್ಲದೆ ಇಂದು ನಾಳೆ ಬಂದಾರೆಂಬ ಆಸೆಯ ಎಳೆಗಳನ್ನು ಎದೆಯಲ್ಲಿ ಹೊದ್ದು, ಸಹಸ್ರಾರು ಹೆಂಗಳೆಯರು, ತಮ್ಮದೇ ಮನೆಯ ಹೊಸ್ತಿಲ ಮೇಲೆ ಹಲವಾರು ವರುಷಗಳಿಂದ ಕಾಯುತ್ತಾ ಕುಳಿತಿದ್ದಾರೆ. ಈ ಸಮಾನ ದುಃಖಿಗಳು ತಮ್ಮದೇ ಆದ ಒಂದು ಸಂಘ ಸ್ಥಾಪಿಸಿಕೊಂಡಿದ್ದಾರೆ. ಪರಸ್ಪರ ದುಃಘ ಹಂಚಿಕೊಳ್ಳುವಿಕೆ, ಕಾಯುವ ಅರ್ಥ ಹುಡುಕಿಕೊಳ್ಳುವಿಕೆ, ಸಾಂತ್ವನ ಹೇಳಿಕೊಳ್ಳುವಿಕೆ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಕೈಲಾಗುವವರು, ಕೈಲಾಗದವರಿಗೆ ಸಹಾಯ ಮಾಡುವಿಕೆ. ಈ ಸಂಘದ ಕಾರ್ಯ ಚಟುವಟಿಕೆಗಳು. ಈ ಮಹಿಳಾ ಸಂಘಟಿತ ಶಕ್ತಿ, ಪ್ರತಿಮನೆಯ ಪುರುಷಸ್ಥಾನವನ್ನು ತುಂಬದೇ ಹೋದರೂ ಕೆಲವು ಕರ್ತವ್ಯಗಳನ್ನು ವಹಿಸಿಕೊಳ್ಳುವುದು ಇದಕ್ಕೆ ಸಾಧ್ಯವಾಗಿದೆ. ಮುಖ್ಯವಾಗಿ ಇವರು ಈ ಸಂಘಟನೆಯ ಮೂಲಕ ಮಾನಸಿಕ ಭದ್ರತೆಯನ್ನು ಕಂಡುಕೊಂಡಿದ್ದಾರೆ. 'ತಮ್ಮ ಮನೆಯ 'ಗಂಡು' ಇಂದಲ್ಲ ನಾಳೆ ಬಂದಾನು' ಎಂದು ಕಾಯುವುದಕ್ಕೂ ಆಶಾವಾದವನ್ನು ಬಿತ್ತುವ, ಮತ್ತು 'ಅವ ಬಾರದಿದ್ದರೆ ಹಾಗೆಯೇ ಬದುಕೇವು' ಎನ್ನುವ ವಾಸ್ತವವನ್ನು ಎದುರಿಸುವ ಶಕ್ತಿಯಾಗಿದೆ ಈ ಸಂಘ. ಶ್ರೀಮತಿ ಜ಼ೂತಿ ಎನ್ನುವ ಮಹಿಳೆ ಇದರ ಮುಂದಾಳತ್ವ ವಹಿಸಿಕೊಂಡು ದುಡಿಯುತ್ತಾದ್ದಾರೆ.

ಥೈಲ್ಯಾಂಡನ್ನು ಇಡೀ ವಿಶ್ವ 'ಕಾಮದನೆಲ' ಎಂದು ತಿಳಿದು-ಕೊಂಡಿದೆ. ಶ್ರೀಮಂತ ರಾಷ್ಟ್ರಗಳ ಅತಿಶ್ರೀಮಂತರು ಕೇವಲ ಸುಂದರಿ-ಯರಿಗಾಗಿಯೇ ಥೈಲ್ಯಾಂಡ್ ಪ್ರವಾಸ ಕೈಗೊಳ್ಳುತ್ತಾರೆ. ಥೈಲ್ಯಾಂಡಿನಲ್ಲಿ ಬಹು ಸಂಖ್ಯೆಯಲ್ಲಿ ಯುವತಿಯರು ಲೈಂಗಿಕ ವ್ಯಾಪರವನ್ನೇ ಬದುಕನ್ನಾಗಿಸಿಕೊಂಡು ಬಿಟ್ಟಿದ್ದಾರೆ. ಪರಿಣಾಮ ?? ರೋಗಗಳು ! ಈ ನೆಲದಲ್ಲಿ ಲೈಂಗಿಕ ರೋಗಗಳೇ ಅಲ್ಲದೆ ಏಡ್ಸ್ ಸಹ ತನ್ನ ತಾಂಡವ ನೃತ್ಯ ನಡೆಸಿದೆ. ಇಂಥ ಸ್ಥಿತಿಯಲ್ಲಿ ಸಾಮಾಜಿಕ ಕಳಕಳಿಯಿರುವವರು, 'ಮನುಷ್ಯ ಪ್ರೀತಿ' ಇರುವವರು ಏನು ಮಾಡಬಹುದು ? ಇದಕ್ಕುತ್ತರ ಮಿಸ್ಟರ್ ವಿಚಾಯಿಲ್ ! ಈತ ಇದಕ್ಕೊಂದು ನವಮಾರ್ಗ ಸೃಷ್ಟಿಸಿಕೊಂಡ ! ತರಕಾರಿ ಮಾರುತ್ತಿದ್ದ ಇವ, 'ಕ್ಯಾಬೇಜಸ್ ಅಂಡ್ ಕಾಂಡೋಮ್ಸ್' ಎನ್ನುವ ಯೋಜನೆ ಹಮ್ಮಿಕೊಂಡ, ತರಕಾರಿಯ ಜೊತೆ ಪುಕ್ಕಟೆ ಕಾಂಡೋಮ್ ವಿತರಣೆ, ಜನ ಸೇರುವ ಕಡೆ ಲೈಂಗಿಕ ರೋಗಗಳ ಭೀಕರತೆಯ ಬಗ್ಗೆ ಚಿಕ್ಕ ಪುಟ್ಟ ಭಾಷಣ, ಏಡ್ಸ್ ಬಗ್ಗೆ ಕರಪತ್ರ ಮುದ್ರಿಸಿ ಹಂಚುವುದು ಹೀಗೆ ಈತನ ಯೋಜನೆಯಲ್ಲಿ ಅನೇಕ ಕಾರ್ಯಕ್ರಮಗಳಿದ್ದವು. ಈ ಕೆಲಸಕ್ಕಾಗಿ ಈತ ಒಂದು ಪುಟ್ಟ ಸೈನ್ಯವನ್ನೇ ಕಟ್ಟಿದ. ಪ್ರಾರಂಭದಲ್ಲಿ ಯುವಕರು ಮಾತ್ರ ಇರುತ್ತಿದ್ದ ಈ ಗುಂಪಿನಲ್ಲಿ ಕ್ರಮೇಣ ವಿದ್ಯಾವಂತ, ಉದ್ಯೋಗಸ್ಥ ಮಹಿಳೆಯರೂ ಸೇರಿದರು. ಇಂದು ಈ ತಂಡದಲ್ಲಿ ಮಹಿಳೆಯರ ಸಂಖ್ಯೆಯೇ ಹೆಚ್ಚಾಗಿದೆ. ಕಾಂಡೋಮ್‌ಗಳ ತಯಾರಿಕೆಯಿಂದ ಹಿಡಿದು ಪ್ಯಾಕಿಂಗ್ ಮಾಡಿ ಹಂಚುವವರೆಗೆ ಈ ಮಹಿಳೆಯರು ದುಡಿಯುತ್ತಾರೆ. ಈ ಎಲ್ಲ ಕೆಲಸವನ್ನೂ ಈ ಜನ ಉಚಿತವಾಗಿ ಮಾಡುತ್ತಾರೆ. ಇದಕ್ಕೆ ಸರ್ಕಾರವಾಗಲೀ ಸಂಘ ಸಂಸ್ಥೆಗಳಾಗಲೀ ಧನ ಸಹಾಯ ಮಾಡುವುದಿಲ್ಲ. ಇವರೆಲ್ಲರಿಗೂ ತಮ್ಮದೇ ಉದ್ಯೋಗಗಳಿರುವು-ದರಿಂದ ತಾವುಗಳಿಸಿದ ಮತ್ತು ಉಳಿಸಿದ ಹಣ ಮತ್ತು ಬಿಡುವುಗಳನ್ನು ಈ ಕೆಲಸಕ್ಕೆ ವ್ಯಯಿಸುತ್ತಾರೆ. ಕುಹಕಿಗಳು ವಿಚಾಯಿಲ್‌ನನ್ನು 'ಮಿಸ್ಟರ್ ಕಾಂಡೋಮ್' ಎಂದು ರೇಗಿಸಿದರೂ, ಪಟ್ಟು ಪಿಡದ ಈತನ ಪ್ರಾಜೆಕ್ಟ್ 'ಕ್ಯಾಬೇಜಸ್ ಅಂಡ್ ಕಾಂಡೋಮ್ಸ್' ಛಲದಿಂದ ಮುನ್ನಡೆಯುತ್ತಿದೆ. ಆರು ವರ್ಷಗಳಿಂದ ನಡೆಯುತ್ತಿರುವ ಈ ಕ್ರಾಂತಿ ಜನ ಜಾಗೃತಿಯನ್ನು ತರುವಲ್ಲಿ ಯಶಸ್ವಿಯಾಗಿದೆ. ಈಗೀಗ ಲೈಂಗಿಕ ರೋಗಗಳು ಬಹಳಷ್ಟು ಹತೋಟಿಗೆ ಬಂದಿದೆ ಎಂದು ವೈದ್ಯಕೀಯ ವರದಿ ಹೇಳುತ್ತದೆ. ಮ್ಯಾಗ್‌ಸೆಸೆ ಅವಾರ್ಡ್ ಸಹ 'ಮಿಸ್ಟರ್ ಕಾಂಡೋಮ್'ನನ್ನು ಹುಡುಕಿಕೊಂಡು ಬಂದಿದೆ.

ಐವತ್ತು ವರ್ಷಗಳ ಹಿಂದೆ ಭಾರತ ಇಡೀ ವಿಶ್ವಕ್ಕೇ ಮಾದರಿ-ಯಾಗುವಂತೆ ಸಂಘಟನೆಗಳ ಅರ್ಥಗಳನ್ನು ಕಂಡುಕೊಂಡಿತು. ಮಹಿಳೆಯರೂ ಸ್ವಾತಂತ್ರ್ಯ ಹೋರಾಟದ ಮುಖ್ಯ ವಾಹಿನಿಯಲ್ಲಿ ಸೇರಿ ಅವಿರತ ದುಡಿದರು. ಸ್ವಚ್ಛ ಪ್ರಜಾಪ್ರಭುತ್ವದ ಏಕೈಕ ಗುರಿಗಾಗಿ ಹೋರಾಡಿದರು. ಹೋರಾಟ ವಿರಮಿಸಿ ಅರ್ಧ ಶತಕದ ನಂತರ ಇಂದೇನಾಗಿದೆ. ಮುಖ್ಯ ವಾಹಿನಿಯಿಂದ ಮಹಿಳೆಯರನ್ನು ಉಚ್ಚಾಟಿಸಲಾಗಿದೆ. ಪ್ರತಿಯೊಂದು ಹಕ್ಕಿಗೂ ಮಹಿಳೆ ಹೋರಾಡ-ಬೇಕಾಗಿದೆ. ರಾಷ್ಟ್ರದ ಅರ್ಧ ಜನ ಸಂಖ್ಯೆಯಷ್ಟಿರುವ ಮಹಿಳೆಯರ ಅಗತ್ಯಗಳ ಬಗ್ಗೆ ಸ್ಥಾನ ಮಾನಗಳ ಬಗ್ಗೆ, ಪುರುಷ ಪ್ರಧಾನದ ಅಟ್ಟಹಾಸದ 'ವ್ಯವಸ್ಥೆ' ತೀರಾ ಅವಜ್ಞೆ ತಳೆಯುತ್ತಿದೆ. ಎಲ್ಲ ರಾಜಕೀಯ ಪಕ್ಷಗಳಲ್ಲಿ 'ನೆಪಮಾತ್ರ'ಕ್ಕಿರುವ ಮಹಿಳೆಯರೂ ಮೂವತ್ಮೂರು

ಪರ್ಸೆಂಟ್‌ಗಾಗಿ ಪಟ್ಟು ಹಿಡಿದು ಒತ್ತಾಯ ತರುವ ಹಂತದಲ್ಲೇ, ನಮ್ಮ ಒಟ್ಟು ವ್ಯವಸ್ಥೆ ಮಹಿಳೆಯರನ್ನು ಉಳಿಸಿದೆ. ಮಹಿಳೆಯರ ಇನ್ನುಳಿದ ಸಂಕಷ್ಟದ ಕೂಗು ಅದು ಯಾಕೆ ಯಾರ ಕಿವಿಗೂ ತಲುಪುತ್ತಿಲ್ಲವೋ ಯಾರು ಹೇಳಬೇಕು?

ಶ್ರೀಲಂಕಾದಂತೆ, ಥೈಲ್ಯಾಂಡಿನಂತೆ ನಮ್ಮಲ್ಲಿಯೂ ಮಹಿಳೆಯರು ಸಂಪ್ರದಾಯದ ಜಂಜಾಟಗಳನ್ನೆಲ್ಲಾ ಝಾಡಿಸಿಕೊಂಡು ಹೊಸರೀತಿ-ಯಲ್ಲಿ ಸಂಘಟನೆ ಮಾಡಬೇಕಾಗಿದೆ. ಅತ್ಯಾಚಾರಕ್ಕೆ ಬಲಿಯಾದವರ ಸಂಘ, ಹೆಣ್ಣು ಭ್ರೂಣಗಳನ್ನು ಸಾಯಿಸಬೇಕಾದ ಮಾತೆಯರ ಸಂಘ, ವರದಕ್ಷಿಣೆಯ ಉರಿಯಲ್ಲಿ ಅರೆ ಬೇಯುತ್ತಿರುವವರ ಸಂಘ, ಅನಕ್ಷರತೆಯ ಕತ್ತಲಲ್ಲಿ ಉಳಿದ ಹೆಣ್ಣುಗಳ ಸಂಘ, ಪುಟ್ಟ ವಯಸ್ಸಿನಲ್ಲಿ ತಾಳಿಗೆ ಕುತ್ತಿಗೆ ಚಾಚಿದವರ ಸಂಘ, ಒಂದೇ ಎರಡೇ ಎಷ್ಟು ಸಂಘಟನೆಗಳು ಹುಟ್ಟಬೇಕೀಗ? ಶ್ರೀಲಂಕಾದ ಝೂಕಿಯ ಹಾಗೆ, ಥೈಲ್ಯಾಂಡಿನ ವಿಚಾಯಿಲ್‌ನ ಹಾಗೆ ಮಹಿಳೆಯರ ಕಣ್ಣಿನ ಹನಿಗಳನ್ನು ಹಿಡಿದಿಡಲು ಯಾರು ಹುಟ್ಟಿದ್ದಾರೆ ಈ ತ್ರಿವಿಕ್ರಮನ ನೆಲದಲ್ಲಿ ?

- ಶತಭಿಷಾ

---

-7ನೇ ಪುಟದಿಂದ ....

ಹೋಗಿರುವುದೂ ಉಂಟು. ಹಣದ ವ್ಯವಹಾರವನ್ನೆಲ್ಲ ಬಾಯಲ್ಲೇ ಲೆಕ್ಕ ಇಟ್ಟುಕೊಳ್ಳುವ ಇವರ ನೆನಪಿನ ಶಕ್ತಿ ಅಪಾರ. 'ನನಗೇನೂ ಗೊತ್ತಿಲ್ಲ, ನಾನು ಕಲಿತವಳಲ್ಲ' ಎಂದು ಹೇಳುತ್ತಲೇ (ಈ ಮಾತಿನಿಂದಲೇ ಇವರನ್ನು ದುರುಪಯೋಗ ಪಡಿಸಿಕೊಂಡವರೂ ಇದ್ದಾರೆ) ತಾನು ಇಷ್ಟು ವರ್ಷಗಳು ನಿಷ್ಠೆಯಿಂದ ಮಾಡಿದ ಕೆಲಸದಲ್ಲಿ ತೃಪ್ತಿಯಿದೆ ಎನ್ನುತ್ತಾರೆ.

65ರ ಹರೆಯದ ಚೆನ್ನಕ್ಕ ಎಂಥ ಕೆಲಸವನ್ನಾದರೂ ಧೈರ್ಯದಿಂದ ಎದುರಿಸಿಬಿಡುವ ಮಹಾಸ್ವಾಭಿಮಾನಿ. ಬಿಡುವಿನ ವೇಳೆಯಲ್ಲಿ ಹೊಲದಲ್ಲಿ ದುಡಿಯುವುದರ ಜೊತೆಗೇ ಓದುವ ಹವ್ಯಾಸವನ್ನೂ ಇಟ್ಟುಕೊಂಡಿರುವ ಇವರಿಗೆ ಶಿವಶರಣರ ವಚನಗಳು, ಗಾಂಧೀ-ವಿನೋಬಾ ಸಾಹಿತ್ಯ, ಗೀತಾ, ವಿವೇಕಾನಂದ, ರಾಮಕೃಷ್ಣ ಪರಮಹಂಸ, ವೇದ, ಈಶಾವಾಸ್ಯೋಪನಿಷತ್, ಕಠೋಪನಿಷತ್ -ತುಂಬಾ ಇಷ್ಟವಾದುವು.

ಚೆನ್ನಕ್ಕ ಇದ್ದಲ್ಲೆಲ್ಲಾ ನಗು ಇದ್ದೇ ಇರುತ್ತದೆ. ಅವರ ಸ್ವಭಾವವೇ ಅಂಥದು. ಇದರಿಂದಾಗೇ ಎಲ್ಲರೂ ಅವರತ್ತ ಆಕರ್ಷಿತರಾಗುತ್ತಾರೆ. ಯಾರಾದರೂ ನೀವು ಏನು ಓದಿದ್ದೀರಿ? ಅಂದ್ರೆ, 'ನಂದು ಪಿ.ಎಚ್‌ಡಿ. ಆಗೇದ' ಅಂತ ಕೇಳಿದವರನ್ನು ದಂಗು ಬಡಿಸಿ, 'ಸಂಡಾಸು ಸಫಾಯಿ ಮಾಡೋದ್ರೊಳಗೆ ವಿನೋಬಾಜಿ ನನಗೆ ಪಿ.ಎಚ್‌ಡಿ. ಕೊಟ್ಟಿದ್ದಾರ !' ಅಂತ ಹೆಮ್ಮೆ ಮಿಶ್ರಿತ ತಮಾಷೆಯಲ್ಲಿ ಹೇಳಿದರೂ ಪುಸ್ತಕದ ಬದನೆಕಾಯಿಯಿಂದ ಏನೂ ಸಾಧ್ಯವಿಲ್ಲ. ಅದಕ್ಕಿಂತ ಅನುಭವವೇ ದೊಡ್ಡದೆನ್ನುವುದನ್ನು ಹೊಳೆಸುತ್ತಾರೆ. ನಿಜಕ್ಕೂ ಯಾವ ಪಿ.ಎಚ್‌ಡಿ.ಯೂ ಅವರು ಮಾಡಿರುವ ಕೆಲಸಗಳ ಮುಂದೆ ಶೂನ್ಯವೇ.

ಮೂಢ ನಂಬಿಕೆಗಳನ್ನು ಖಂಡಿಸುವ, ಮೂರ್ತಿ ಪೂಜೆಯನ್ನು ಒಪ್ಪದ ಚೆನ್ನಕ್ಕ ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆಯಿರಬೇಕೆನ್ನುತ್ತಾರೆ. ಪುನರ್ಜನ್ಮದಲ್ಲಿ ನಂಬಿಕೆಯಟ್ಟಿರುವ ಇವರು 'ಮುಕ್ತಿ' ಪಡೆಯುವುದನ್ನು ವಿರೋಧಿಸುತ್ತಾರೆ. 'ಮುಕ್ತಿ ಪಡೆದು ಮಾಡೋದಾದ್ರೂ ಏನದ ? ಬರೀ ಆ ದೇವ್ರ ಕಾಲನ್ನಾರ್ರೂ ಎಷ್ಟಂತ ಒತ್ತಾ ಕೂರೋದು ? ಜನ್ಮಜನ್ಮದಲ್ಲೂ ಮಾನವರಾಗಿ ಹುಟ್ಟಿ ಸಾಕಷ್ಟು ಸಮಾಜ ಸೇವೆ ಮಾಡಬಹುದು. ಅದೂ ನಮ್ಮ ಭಾರತದಂಥ ರಾಷ್ಟ್ರದೊಳಗೆ ಮಾಡಲು ಸಾಕಷ್ಟು ಕೆಲಸಗಳಿವೆ. ಸೋಮಾರಿಗಳು ಮಾತ್ರವೇ ಮುಕ್ತಿ ಬಯಸೋದು!'

ಮುಖ ನೋಡಿದ ಕೂಡಲೇ ಸ್ವಲ್ಪ ಬಿಗುವಿನ ಸ್ವಭಾವದಂತೆ ಕಂಡರೂ ಅವರು ಮಾತನಾಡಲು ಬಾಯ್ಬಿಟ್ಟರೆ ಅವರೊಳಗಿನ ಆತ್ಮೀಯತೆ, ನಗು, ಪ್ರೀತಿ, ವಿಶ್ವಾಸ, ಬದುಕಿನ ಬಗೆಗಿನ ಶ್ರದ್ಧೆ, ನಿಷ್ಠೆ, ಸೇವಾ ಮನೋಭಾವ, ಅವರ ಅಚ್ಚುಕಟ್ಟುತನ ಎಲ್ಲವೂ ಸ್ವಲ್ಪ ಹೊತ್ತಿಗೇ ನಮಗೆ ಗೋಚರವಾಗುತ್ತದೆ. ಬರಿಯ ಅಪನಂಬಿಕೆಯ ಬದುಕಿನ ಸುಳಿಯಲ್ಲಿ ಸಿಕ್ಕು ಬದುಕುತ್ತಿರುವ ನಮಗೆ ಸತ್ಯ, ನಿಷ್ಠೆ, ಪ್ರಾಮಾಣಿಕತೆಗಳು ಇನ್ನೂ ಜೀವಂತವಾಗಿವೆ ಎನಿಸುತ್ತದೆ.

ಇವರೆಲ್ಲಾ ಸೇವೆಗೆ 1996ರ 'ದೇಶಸ್ನೇಹಿ' ಪ್ರಶಸ್ತಿ ದೊರೆತಿದೆ. ಯಾವ ಪ್ರಶಸ್ತಿಯೂ ಇವರ ಸೇವೆಯ ಮುಂದೆ ಚಿಕ್ಕದೇ. 'ಹೆಣ್ಣುಮಕ್ಕಳು ಯಾವತ್ತೂ ಸ್ವತಂತ್ರ ಮತ್ತು ಸ್ವಾವಲಂಬನೆ-ಯಾಗಿರಬೇಕು' ಎಂದು ಎಲ್ಲೆಡೆ ಸಾರುತ್ತಾ ಸಾಗಿರುವ ಚೆನ್ನಕ್ಕನವರಂಥ ಮತ್ತು ಅವರೊಂದಿಗಿನ 'ಅಕ್ಕಂದಿರ' ಬದುಕೇ ಇಂದಿನ ಎಲ್ಲ ಹೆಣ್ಣುಮಕ್ಕಳಿಗೂ ಒಂದು ಪಾಠದಂತಿದೆಯಲ್ಲವೇ ?

# ಪರದೆಯಲ್ಲಿದ್ದುಕೊಂಡೇ ಪ್ರಗತಿಯತ್ತ ಹೆಜ್ಜೆ

- ಹೆಚ್.ಎಸ್.ಗೀತಾ

1998ರ ಏಪ್ರಿಲ್ 19 ಮತ್ತು 20 ಮುಸ್ಲಿಂ ಮಹಿಳಾ ಸಮುದಾಯಕ್ಕೆ ಅತ್ಯಂತ ಮಹತ್ತ್ವದ ದಿನಗಳು. ಅಂದು ಕೇರಳದ ಮಲಪ್ಪುರಂ ಜಿಲ್ಲೆಯ ಕೋಟ್ಟಕ್ಕಲ್‌ನಲ್ಲಿ ಇಸ್ಲಾಂ ಧಾರ್ಮಿಕ ಸಂಸ್ಥೆಯಾದ ಜಮಾತ್-ಎ-ಇಸ್ಲಾಮಿಯ ರಾಜ್ಯಮಟ್ಟದ ಸಮಾವೇಶ ಜರುಗಿತು. "ಈ ದೇಶದಲ್ಲಿ ಸಮಾರಂಭ-ಸಮಾವೇಶಗಳೇನು, ನಡೆಯುತ್ತಲೇ ಇರುತ್ತವೆ. ಒಂದು ಚಿತ್ರ ನೂರು ದಿನ ಓಡಿದರೂ ಸಮಾರಂಭ ನಡೆಯುತ್ತದೆ. ಒಂದು ಸರ್ಕಾರ ನೂರು ದಿನ ನಡೆದರೂ ಒಂದು ಸಮಾವೇಶ ಅನ್ನುತ್ತಾರೆ" ಎಂದು ಯಾರೂ ಮೂಗು ಮುರಿಯುವಂತಿಲ್ಲ, ಹಾಗೆ ಹೇಳುವವರು ಮುಂದಿನ ಪ್ಯಾರಾ ಓದಿ ನಾಲಗೆ ಕಚ್ಚಿಕೊಳ್ಳಬೇಕಾದೀತು ಅಷ್ಟೆ.

ಕೇರಳದಲ್ಲಿ ಏಪ್ರಿಲ್‌ನಲ್ಲಿ ನಡೆದ ಸಮಾವೇಶ ಹೊಸ ಇತಿಹಾಸವನ್ನು ಸೃಷ್ಟಿಸಿದೆ ಎಂದೇ ಹೇಳಬೇಕು. ಏಕೆಂದರೆ ಈ ಸಮಾವೇಶದಲ್ಲಿ ನಾಲ್ವರು ಮುಸ್ಲಿಂ ಮಹಿಳಾ ಮುಖಂಡರು ಪುರುಷ ಮುಖಂಡರುಗಳೊಂದಿಗೆ ವೇದಿಕೆಯನ್ನು ಸರಿಸಮನಾಗಿ ಹಂಚಿಕೊಂಡಿದ್ದರು. ಅಷ್ಟೇ ಅಲ್ಲ, ಆ ಸಭೆಯಲ್ಲಿ ಸುಮಾರು ಒಂದು ಲಕ್ಷ ಮುಸ್ಲಿಂ ಮಹಿಳೆಯರು ಭಾಗವಹಿಸಿದ್ದರು. ಹಾಯೇ, ಮಹಿಳೆ ಎಂದರೇನು? ಸಭೆಯಲ್ಲಿ ಭಾಗವಹಿಸುವುದೆಂದರೇನು? ವೇದಿಕೆಯ ಮೇಲಿಂದ ಭಾಷಣ ಬಿಗಿಯುವುದೆಂದರೇನು ? ಮುಸ್ಲಿಂ ಮೂಲಭೂತವಾದಿಗಳ ಎದೆಯಲ್ಲಿ ದಳ್ಳುರಿ. ಪರಿಣಾಮ- ಈ ಸಭೆಯನ್ನು, ಸಭೆಯ ಆಗುಹೋಗುಗಳನ್ನು ಖಂಡಿಸಿದ್ದಂಥ ಭಿತ್ತಿ ಚಿತ್ರಗಳು ಕೇರಳದ ಉತ್ತರ ಭಾಗಗಳಲ್ಲಿ ಕಾಣಿಸಿಕೊಂಡವು. ಪ್ರಗತಿಯತ್ತ ಪರದೆಯಲ್ಲಿದ್ದುಕೊಂಡೇ ಹೆಜ್ಜೆ ಹಾಕುತ್ತಿರುವ ಮಹಿಳೆಯರಿಗೆ ಈ ವಿರೋಧ ಸಮಸ್ಯೆಯಾಗೇನೂ ಕಂಡಿಲ್ಲ. ಬದಲಿಗೆ ದಾಪುಗಾಲು ಹಾಕುವ ಕೆಚ್ಚು ಮೂಡಿಸಿದೆ.

ಕೇರಳದ ಮುಸ್ಲಿಂ ಮಹಿಳೆಯರ ಹೋರಾಟ ಒಂದು ರೀತಿ ಸದ್ದಿಲ್ಲದೆಯೇ ನಡೆದಿದೆ. ಅಪಾರ ಸಸ್ಯಸಂಪತ್ತನ್ನು, ಜೀವ ಸಂಪತ್ತನ್ನೂ ತನ್ನಲ್ಲಿ ಅಡಗಿಸಿಕೊಂಡಿರುವ ಅಲ್ಲಿನ 'ಸೈಲೆಂಟ್ ವ್ಯಾಲಿ'ಯಂತೆ ಇವರ ಈ ಮೌನ ಹೋರಾಟದಲ್ಲೂ ಅಪಾರ ಶಕ್ತಿಯಿದೆ, ಚೇತನವಿದೆ. ಹೋರಾಟದ ಸಂದೇಶ ಹಳ್ಳಿಗಳನ್ನೂ ಮುಟ್ಟಿದೆ. ಉದಾಹರಣೆಗೆ ಖದೀಜಾಳನ್ನೇ ತೆಗೆದುಕೊಳ್ಳಬಹುದು. ಈಕೆ ಮಲಪ್ಪುರಂ ಜಿಲ್ಲೆಯ ಮಾಂಪಾಡು ಬಳಿಯ ಗ್ರಾಮದವಳು. ಅಂಧ ವಿಶ್ವಾಸಗಳೊಂದಿಗೆ ಬೆಳೆದಾಕೆ. ಕಾಯಿಲೆ ಕಸಾಲೆ ಬಂದಾಗ ತಜ್ಞರ ಬಳಿಗೆ ಹೋಗದೆ ಢೋಂಗಿ ವೈದ್ಯರ ಪವಾಡಗಳಿಗೆ ಮರುಳಾಗಿ, ಅದರ ಅದ್ಭುತ ಮದ್ದುಗಳನ್ನೂ ಸೇವಿಸಿದವಳು. ಅಂಥಹ ಖದೀಜಾ ಈಗ ಹೇಳುತ್ತಾಳೆ - "ಅದೆಲ್ಲಾ ಹಳೆಯ ಕತೆ. ಆದರೂ ಆ ಢೋಂಗಿಗಳಿಗೆ ಸಾಕಷ್ಟು ಹಣವನ್ನೇನೋ ಸುರಿದಿದ್ದೇನೆ. ಏನು ಮಾಡುವುದು? ನನಗಾಗ ಬುದ್ಧಿಯೇ ಇರಲಿಲ್ಲ. ವಿದ್ಯೆಯ ಮಹತ್ತ್ವ ಏನು ಅನ್ನುವುದು ನನಗೆ ಈಗ ತಾನೆ ಗೊತ್ತಾಗಿದೆ!" ಗ್ರಾಮೀಣ ಮಹಿಳೆಯಿಂದ ಬರುವ ಈ ಮಾತುಗಳು ಮುಸ್ಲಿಂ ಮಹಿಳೆಯರಲ್ಲಿ ಆಗುತ್ತಿರುವ ಬದಲಾವಣೆಗೆ ಒಂದು ಸಾಕ್ಷಿ. ಮುಸ್ಲಿಂ ಮಹಿಳೆಯರ ಹಕ್ಕಿನ ಹೋರಾಟಕ್ಕೆ ಬೆನ್ನೆಲುಬಾಗಿ ನಿಂತಿರುವುದು ಜಮಾತ್-ಎ-ಇಸ್ಲಾಮಿ ಹಾಗೂ ಮುಜಾಹಿದ್ ಎಂಬ ಎರಡು ಧಾರ್ಮಿಕ ಸಂಸ್ಥೆಗಳು. ಕಡಿಮೆ ಮಡಿವಂತಿಕೆಯ ಧಾರ್ಮಿಕ ಸಂಸ್ಥೆಗಳೆಂದೂ ಹೇಳಬಹುದು. ಮುಜಾಹಿದ್ ಸಂಸ್ಥೆಯ ಮಹಿಳಾ ಚಳುವಳಿಯು MGWM (Muslim Girl's and Women's Movement) ಎಂದೇ ಹೆಸರುವಾಸಿಯಾಗಿದೆ. ಜಮಾತ್-ಎ-ಇಸ್ಲಾಮಿನಲ್ಲಿ ಬಾಲಕಿಯರಿಗಾಗಿ ಹಾಗೂ 25 ವರ್ಷಕ್ಕೆ ಮೇಲ್ಪಟ್ಟ ಮಹಿಳೆಯರಿಗಾಗಿ ಪ್ರತ್ಯೇಕ ಅಂಗಗಳುಂಟು. ಜಮಾತ್-ಎ-ಇಸ್ಲಾಮಿ ಮಹಿಳೆಯರಿಗಾಗಿಯೇ ಹೊರತರುತ್ತಿರುವ ನಿಯತಕಾಲಿಕಗಳು ಅಲ್ಲಿ ಬಹಳ ಜನಪ್ರಿಯವಾಗಿವೆ. ಈ ನಿಯತಕಾಲಿಕಗಳಲ್ಲಿ ಮಾಮೂಲಿನ ಕತೆ, ಕವನಗಳಲ್ಲದೆ ವಿಚಾರಯೋಗ್ಯ ವಿಷಯಗಳ ಬಗ್ಗೆ ಚರ್ಚೆ-ಲೇಖನಗಳೂ ಇರುತ್ತವೆ.

ಮುಸ್ಲಿಂ ಜನಾಂಗದಲ್ಲಿ ಷಿಯಾ ಮತ್ತು ಸುನ್ನಿ ಎಂಬ ಎರಡು ಪಂಗಡಗಳಿವೆ ಎಂಬುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದ ವಿಷಯವೇ. ಸುನ್ನಿ ಪಂಗಡದಲ್ಲಿ ಮಹಿಳೆಯರಿಗೆ ಕಟ್ಟುಪಾಡುಗಳು ಜಾಸ್ತಿ. ತಮ್ಮ ಮಹಿಳೆಯರೂ ಸಮಾಜದಲ್ಲಿ ಒಂದು ಒಳ್ಳೆಯ ಸ್ಥಾನ-ಮಾನ ಹೊಂದಲಿ ಎಂಬ ಕಲ್ಪನೆ ಸಹ ಇವರಿಗೆ ಜೀರ್ಣವಾಗದ ವಿಷಯ. ಇಂಥ ಪರಿಸ್ಥಿತಿಯಲ್ಲಿ ಕರಾವಳಿ ಪ್ರದೇಶದ ಕೇರಳದಲ್ಲಿ ಬದಲಾವಣೆಯ ಗಾಳಿ ಮಂದವಾದರೂ, ನಿರಂತರವಾಗಿ ಬೀಸತೊಡಗಿರುವುದು ಸಂತಸದ ಸುದ್ದಿ. ಮತ್ತೊಂದು ಆಶ್ಚರ್ಯವೆಂದರೆ ಸುನ್ನಿ ಪಂಗಡದವರೂ ಈಗ ಮಹಿಳೆಯರಿಗಾಗಿ ಒಂದು ನಿಯತಕಾಲಿಕವನ್ನು ಹೊರತರುತ್ತಿದ್ದಾರೆ. ಇದೂ ಸಹ ಸಾಕಷ್ಟು ಜನಪ್ರಿಯವಾಗಿದೆ. ಆದರೂ ವಿಪರ್ಯಾಸದ ವಿಷಯವೇನೆಂದರೆ, ಈ ಪತ್ರಿಕಾಲಯದಲ್ಲಿ ಮಹಿಳಾ ಉದ್ಯೋಗಿಗಳೇ ಇಲ್ಲ. ಆದರೆ ಜಮಾತ್-ಎ-ಇಸ್ಲಾಮಿಯ 'ಆರಮಮ್' ಮತ್ತು ಮುಜಾಹಿದ್‌ನ 'ಪುದವಾ'ದಲ್ಲಿ ಮಹಿಳೆಯರೂ ಕೆಲಸ ಮಾಡುತ್ತಾರೆ. ಜಮಾತ್-ಎ-ಇಸ್ಲಾಮಿಯ ಮಹಿಳಾ ವಿಭಾಗದ ಅಧ್ಯಕ್ಷೆ ಫಾತಿಮಾ ಮೂಸಾ ಪ್ರಕಾರ ಅವರ ಚಳುವಳಿಯ ಧ್ಯೇಯ "ವಿದ್ಯಾಭ್ಯಾಸದ ಮೂಲಕ ಮಹಿಳೆಯರನ್ನು ಅಜ್ಞಾನದ ಕೂಪದಿಂದ ಮೇಲೆತ್ತುವುದು. ಆದರೆ ಅವು ದೃಶ್ಯ ಹಾಗೂ ಪತ್ರಿಕಾ ಮಾಧ್ಯಮಗಳ ಮೂಲಕ

ಬಿಂಬಿಸಲಾಗುವ ಆಧುನಿಕ ಜಗತ್ತಿನ ವರ್ಣಮಯ ಬದುಕಿಗೆ ಮನಸೋಲಬಾರದು. ಇಸ್ಲಾಂ ತತ್ತ್ವಗಳಿಗೇ ಅತುಕೊಂಡಿರಬೇಕಾದ್ದು ಅವಶ್ಯಕ.''

ಕೋಟ್ಟಕ್ಕಲ್‌ನಲ್ಲಿ ನಡೆದ ಸಮಾವೇಶ ಮುಸ್ಲಿಂ ಮಹಿಳೆಯರು ಹೊರಜಗತ್ತಿಗೆ ತೆರೆದುಕೊಳ್ಳುತ್ತಿರುವುದನ್ನು ತೋರುತ್ತದೆ. ತಮ್ಮ ಹಕ್ಕು ಬಾಧ್ಯತೆಗಳನ್ನು ಅರಿತುಕೊಂಡು ಬದುಕನ್ನು ಹಸನು ಮಾಡಿ-ಕೊಳ್ಳುವುದರಲ್ಲಿ ಅವರಿಗಿರುವ ಆಸಕ್ತಿಯನ್ನು ತೋರುತ್ತದೆ. ಇದುವರೆಗೂ ಕಳೆದುಕೊಂಡಿದ್ದನ್ನು ಇನ್ನು ಮುಂದಾದರೂ ಪಡೆಯ-ಬೇಕೆನ್ನುವ ಅವರ ತುಡಿತವನ್ನು ತೋರುತ್ತದೆ. ತಲೆಮಾರುಗಳಿಂದ 'ಮುಖ ಮರೆಸಿ'ಕೊಂಡೇ ಬದುಕು ಸಾಗಿಸುತ್ತಾ ಬಂದಿರುವ ಈ ಮಹಿಳೆಯರಲ್ಲಿ ಒಮ್ಮಿಂದೊಮ್ಮೆಗೆ ಜಾಗೃತಿ ಮೂಡಿದ್ದಾದರೂ ಹೇಗೆ ಎಂದು ವಿಸ್ಮಯವಾಗುತ್ತದೆ. ಇದೇನೂ ಒಮ್ಮಿಂದೊಮ್ಮೆ ಥಟಕ್ಕನೆ ಆದದ್ದಲ್ಲ. ಮೊದಲೇ ಹೇಳಿದಂತೆ ಸದ್ದಿಲ್ಲದೆ ಆದ ಕ್ರಾಂತಿ. ಅವರಿಗೆ ಅರಿಮೆ ಮೂಡಿಸಿ ಹೋರಾಟದ ಕಣಕ್ಕೆ ಎಳೆದು ತಂದದ್ದು ಮುಜಾಹಿದ್ ಮತ್ತು ಜಮಾತ್-ಎ-ಇಸ್ಲಾಮಿಯ ಚಳುವಳಿಗಳೇ; ಚಳುವಳಿಯ ಅಂಗವಾಗಿ ಆಯೋಜಿಸಲ್ಪಟ್ಟ ಕಾರ್ಯಕ್ರಮಗಳೇ. ವರದಕ್ಷಿಣೆ, ಮೂಢ ನಂಬಿಕೆಗಳು, ಮದುವೆಯಲ್ಲಿ ಮಾಡಲಾಗುವ ದುಂದುವೆಚ್ಚ, ವಿದ್ಯಾಭ್ಯಾಸ ಹಾಗೂ ನೌಕರಿಯ ಮಹತ್ತ್ವ... ಹೀಗೇ ಒಂದಲ್ಲ ಎರಡಲ್ಲ, ದಿನನಿತ್ಯದ ಬದುಕಿನ ಅಸಂಖ್ಯಾತ ವಿಷಯಗಳ ಬಗ್ಗೆ ತಿಳುವಳಿಕೆ ಮೂಡಿಸುವುದು, ಚರ್ಚೆಗಳನ್ನು ಏರ್ಪಡಿಸುವುದು ಮುಂತಾದ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ.

ಕೇರಳದ ಮುಸ್ಲಿಂ ಮಹಿಳೆಯರು ತಮ್ಮ ಹಕ್ಕಿಗಾಗಿ, ನ್ಯಾಯಕ್ಕಾಗಿ ತಾವೇ ಹೋರಾಡುವಷ್ಟು ಮನೋಸ್ಥೈರ್ಯ ಬೆಳೆಸಿಕೊಂಡಿದ್ದಾರೆ ಎನ್ನುವುದಕ್ಕೆ ಮತ್ತೊಂದು ನಿದರ್ಶನ ಇಲ್ಲಿದೆ. ವಿಮೆನ್ಸ್ ಆಕ್ಷನ್ ಕೌನ್ಸಿಲ್ ಎನ್ನುವುದು ಒಂದು ಮಹಿಳಾ ಜಾಗೃತಿ ಸಂಸ್ಥೆ. ಏಪ್ರಿಲ್ ಸಮಾವೇಶದ ನಂತರ ಅನೇಕ ಮುಸ್ಲಿಂ ಮಹಿಳೆಯರು ಈ ಸಂಸ್ಥೆಯ ಸ್ವಯಂ ಸೇವಕಿಯರಾಗಿದ್ದಾರೆ. ಮಹಿಳೆಯರಿಗೆ ಸಂಬಂಧಿಸಿದ ಮಾಮೂಲು ಸಂಗತಿಗಳಿಗಾಗಿ ಹೋರಾಡುವ ಈ ಸಂಸ್ಥೆ ಕೈಗೆತ್ತಿ-ಕೊಳ್ಳುವ ಮತ್ತೊಂದು ವಿಶಿಷ್ಟ ವಿಷಯವೆಂದರೆ ಲೈಂಗಿಕ ಹಗರಣ/ಕಿರುಕುಳಗಳನ್ನು ಬಯಲಿಗೆಳೆಯುವುದು. ಈ ದಿಸೆಯಲ್ಲಿ ತಪ್ಪುಗಳನ್ನು ಹಾಗೂ ತಪ್ಪಿತಸ್ಥರನ್ನು ಮರೆಮಾಚುವ ಸರ್ಕಾರದ ಔದಾಸೀನ್ಯವನ್ನು ಪ್ರತಿಭಟಿಸಿ ಮೆರವಣಿಗೆಗಳನ್ನು ನಡೆಸಲಾಗಿದೆ. ಕಲ್ಲಿಕೋಟೆಯಂಥ ಸಣ್ಣ ಪಟ್ಟಣದಲ್ಲೂ ನಡೆಸಲಾಗುವ ಸೌಂದರ್ಯಸ್ಪರ್ಧೆಗಳನ್ನು ವಿರೋಧಿಸಿ ಮೆರವಣಿಗೆ ನಡೆಸಲಾಗಿದೆ. ಇವುಗಳಲ್ಲೆಲ್ಲಾ ಮುಸ್ಲಿಂ ಮಹಿಳೆಯರು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ.

ಮುಸ್ಲಿಂ ಮಹಿಳೆಯರು ಈ ರೀತಿ ಬಹಿರಂಗವಾಗಿ, ಸಕ್ರಿಯವಾಗಿ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗುವುದು ಅವರ ವಲಯಕ್ಕೆ 'ಕಹಿ ಗುಳಿಗೆ'ಯಾಗಿರಬಹುದು. ಮೂಲಭೂತವಾದಿಗಳು 'ತೋಬಾ ತೋಬಾ' ಎಂದು ಅಂದಿರಲೂ ಬಹುದು. ಆದರೆ ಅತ್ತ ತಿರುವನಂತ-ಪುರದ ಪಾಲಯಂ ಜುಮ್ಮಾ ಮಸೀದಿಯ ಇಮಾಮರು ಮಹಿಳೆಯರ ವಿಷಯದಲ್ಲಿ ತೆಗೆದುಕೊಂಡ ನಿರ್ಧಾರ ಮಾತ್ರ ಅವರಿಗೆ ನುಂಗಲಾರದ ತುತ್ತಾಗಿದ್ದು ಖಂಡಿತ! ಮುಸ್ಲಿಂ ಮಹಿಳೆಯರು ಮಸೀದಿಗೆ ಹೋಗುವಂತಿಲ್ಲ. ಮಸೀದಿಗೆ ಹೋಗುವ ಅರ್ಹತೆ ಕೇವಲ ಪುರುಷರಿಗೆ ಮಾತ್ರ. ಆದರೆ ಇಮಾಮರು ''ಈ ನಡವಳಿಕೆ ಸಲ್ಲದು. ಇದು ಇಸ್ಲಾಂ ನೀತಿಗೇ ವಿರುದ್ಧವಾದುದು'' ಎಂದು ಹೇಳಿ ಮಸೀದಿಯ ಬಾಗಿಲನ್ನು ಮಹಿಳೆಯರಿಗೂ ತೆರೆದಿಟ್ಟರು. ಸಂಪ್ರದಾಯಸ್ಥ ಸುನ್ನಿ ಪಂಗಡದವರು ಇದನ್ನು ತೀವ್ರವಾಗಿ ವಿರೋಧಿಸುತ್ತಾರೆ. ಆದರೆ ಮಸೀದಿಯ ಬಾಗಿಲು ತೆಗೆದಿದ್ದು ಮುಸ್ಲಿಂ ಮಹಿಳೆಯರಿಗೆ ಆತ್ಮವಿಶ್ವಾದ ಹೆಬ್ಬಾಗಿಲೇ ತೆಗೆದಂತಾಯಿತು. MGWMನ ಸಂಸ್ಥಾಪಕ ಅಧ್ಯಕ್ಷೆ ಹಾಗೂ ಅದರ ಸಹ-ಕಾರ್ಯದರ್ಶಿಯೂ ಆಗಿರುವ ಹಬೀಬಾ ಹೇಳುತ್ತಾರೆ-

''ಇಸ್ಲಾಂ ಧರ್ಮ, ಸಮಾನತೆಯನ್ನೇ ಬೋಧಿಸುತ್ತದೆ; ಇಸ್ಲಾಂ ಧರ್ಮದಲ್ಲಿ ಬಹು ಪತ್ನಿತ್ವವೂ ಜಾರಿಯಲ್ಲಿದೆ, ನಿಜ. ಆದರೆ ಈ ಪುರುಷರು ತಮ್ಮ ಮೂಗಿನ ನೇರಕ್ಕೇ ಮಾತನಾಡಿ, ಧರ್ಮದ ದುರುಪಯೋಗ ಮಾಡಿಕೊಳ್ಳುತ್ತಾರೆ.

(ಹಬೀಬಾ ಕಾಲೇಜು ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಾರೆ.)

ಮುಸ್ಲಿಂ ಸಮುದಾಯದ ಮಹಿಳೆಯರಿಗೆತಮ್ಮ ದುಸ್ಥಿತಿಯ ಅರಿವಾಗಿದೆ. ವಿದ್ಯಾಭ್ಯಾಸದಿಂದ ತಮ್ಮ ಜೀವನವೂ ಒಂದು ತಹಬಂದಿಗೆ ಬಂದೀತು, ಒಂದು ದಾರಿಯಾದೀತು ಎಂಬ ತಿಳುವಳಿಕೆ ಮೂಡಿದೆ. ಧರ್ಮದ ಹೆಸರಿನಲ್ಲಿ ನಷ್ಟವಾಗಿರುವ ತಮ್ಮ ಹಕ್ಕುಗಳಿಗಾಗಿ ಹೋರಾಡುವಷ್ಟು ಛಲವೂ ಮೂಡಿದೆ. ಆದರೆ ಈ ಬಗ್ಗೆ ಮುಸ್ಲಿಮೇತರರು ಯಾರೂ ಏನೊಂದೂ ಹೇಳುವುದನ್ನು ಅವರು ಇಷ್ಟ ಪಡುವುದಿಲ್ಲ. ಇತರರು ಅವರತ್ತ ಸಹಾಯಹಸ್ತವನ್ನೂ ಚಾಚಿರಬಹುದು. ಆದರೆ ಅವರಿಗೆ ಅದು ಸಮ್ಮತವಿಲ್ಲ. ಏಕೆಂದರೆ ಅದು ಅವರ ವೈಯುಕ್ತಿಕ ಕಾನೂನು, ವೈಯುಕ್ತಿಕ ಸಮಸ್ಯೆಯಂತೆ.

ಹೌದು, ಒಂದರ್ಥದಲ್ಲಿ ಅದೂ ಸರಿಯೇ! ಯಾವಾಗಲೂ ಒಳಗಿರುವವರೇ ಹೊರಬರುವ ಯತ್ನ ಮಾಡಬೇಕು. ಬದಲಾವಣೆ-ಗಾಗಿ ತಹತಹಿಸಿ ಹೋರಾಡುವ ಕೆಚ್ಚು ಅವರಿಗೇ ಬರಬೇಕು. ಪರದೆಯನ್ನು ದಾಟಿ ಹೊಸ ಗಾಳಿ, ಹೊಸ ಬೆಳಕು ಬರುವಂತಾಗ-ಬೇಕು. ನಮ್ಮ ಹೋರಾಟ ನಾವೇ ನಡೆಸುತ್ತೇವೆ ಎಂಬ ಅವರ ನಿಲುವು ಪ್ರಶಂಸನೀಯವೇ. ಅವರ ಹೋರಾಟವೂ ಯಶಸ್ಸನ್ನೂ ಕಾಣಲಿ ಎಂದೇ ನಾವೂ ಹಾರೈಸುತ್ತೇವೆ.

## 'ಗಾಂಧಿ ವರ್ಸಸ್ ಗಾಂಧಿ' - ನಾಟಕದ ಬಗ್ಗೆ ಒಂದು ಅನಿಸಿಕೆ

- ಶಾಂತಾ ನಾಗರಾಜ್

''ಯಾರಿಗೆ ನನ್ನ ಸಿದ್ಧಾಂತ ಅರ್ಥವಾಗುವುದಿಲ್ಲವೋ ಅವರು ನನ್ನನ್ನು ಆರಾಧಿಸುತ್ತಾರೆ'' ಎಂದು ಖ್ಯಾತ ವಿಜ್ಞಾನಿ ಐನ್‌ಸ್ಟೀನ್ ಒಂದು ಕಡೆ ಹೇಳಿದ್ದಾರೆ ಈ ಮಾತು ಬಸವಣ್ಣ, ವಿವೇಕಾನಂದ, ಮಹಾತ್ಮಗಾಂಧಿ ಮುಂತಾದವರ ಜೀವನಕ್ಕೂ, ಅವರನ್ನು ದೈವತ್ವಕ್ಕೇರಿಸಿದ ಸಮಾಜಕ್ಕೂ ಒಪ್ಪುತ್ತದೆ. 'ಲೋಕ ಕಲ್ಯಾಣ' ವೆನ್ನುವುದನ್ನೇ ಬದುಕಿನ ಗುರಿಯಾಗಿಸಿಕೊಂಡವರಿಗೂ, ಅತ್ಯಂತ ಸಾಮಾನ್ಯರಿಗೂ ಜೀವನದ ನೆಲೆಗಳು ತುಂಬ ಭಿನ್ನವಾಗಿರುತ್ತದೆ. ಮಹ್ವಾಕಾಂಕ್ಷೆಗಳನ್ನು ಸಾಮಾನ್ಯರು ಅರ್ಥಮಾಡಿಕೊಳ್ಳುವುದಕ್ಕೇ ಕಷ್ಟಪಡಬೇಕಾಗುತ್ತದೆ. ಅದರಲ್ಲೂ ಇಂಥ ಅಸಮಾನ್ಯರ ಹತ್ತಿರದ ಸಂಬಂಧಿಗಳ ತಾಳ್ಮೆ, ತ್ಯಾಗಗಳು ಈ ಜೀವಿಗಳ ಊರ್ಧ್ವಗಾಮಿತ್ವಕ್ಕೆ ಅತ್ಯಂತ ಅವಶ್ಯಕವಾಗುತ್ತದೆ.

ಸಾಹಿತ್ಯ ಕಂಡುಕೊಳ್ಳುವ ಹೊಸ ಆಯಾಮಗಳಲ್ಲಿ ಪುರಾಣಗಳನ್ನು ಮರುಚಿಂತನೆಗೆ ಒಡ್ಡುವ, ಮರುಹುಟ್ಟು ಕೊಡುವ, ಮರುಕಟ್ಟುವ ಕೆಲಸಗಳಿಗೆ ಹಚ್ಚಿಕೊಂಡಿದ್ದು ಈಗ ಹಳೆಯ ಮಾತಾಗಿದೆ. ಇದೀಗ ಈ 'ಹುಡುಕುವ ಕ್ರಿಯೆಗೆ' ಚರಿತ್ರೆಯ ಜನಪ್ರಿಯ ನೆಲೆಯಲ್ಲಿ ನಿಂತ ಮಹಾವ್ಯಕ್ತಿಗಳ 'ಕಾಣದ ಮುಖ'ಗಳನ್ನು ತಾರ್ತಿಕವಾಗಿ ಪತ್ತೆಹಚ್ಚುವ ಕೆಲಸಗಳು ಪಕ್ಕಾಗುತ್ತಿವೆ. ಅದೇ ದಾಟಿಯಲ್ಲಿರುವ ನಾಟಕ 'ಗಾಂಧಿ ವರ್ಸಸ್ ಗಾಂಧಿ' - (ಇದೇ ಹೆಸರಿನ ಜಯಂತದಳವಿಯವರ ಕಾದಂಬರಿಯಾಧಾರಿತ)

ಗಾಂಧಿಗೆ 'ನವಭಾರತ ಪಿತಾಮಹ'ನೆನ್ನುವ ಅಭಿದಾನವಿರುವುದನ್ನು ಪ್ರಶ್ನಿಸುವ ಈ ನಾಟಕದಲ್ಲಿ 'ಆತ ಭಾರತಕ್ಕೆ ಪಿತಾಮಹರಾಗಿದ್ದಿರಬಹುದು ಆದರೆ ತನ್ನ ಸ್ವಂತ ಮಕ್ಕಳಿಗೆ ಕೆಟ್ಟ ತಂದೆಯಾಗಿದ್ದರು' ಎನ್ನುವುದನ್ನು ಮುಖ್ಯ ಧೋರಣೆಯಾಗಿ 'ಮನೆಯನ್ನು ಗೆದ್ದು ಮಾರುಗೆಲ್ಲು' ಎನ್ನುವ ರೂಢಿ ಮಾತು ಈ ನಾಟದ ಮುಖ್ಯ ಧ್ವನಿಯೂ ಆಗಿದೆ. ಇದಕ್ಕೆ ಗಾಂಧಿಯವರ ಹಿರಿಯ ಮಗನ ಅಸಂಬದ್ಧ ಬದುಕಿನ ಉದಾಹರಣೆಗಳು ಮುಖ್ಯ ಘಟನೆಗಳಾಗುತ್ತವೆ. ಗಾಂಧಿ ವಿದೇಶಿ ವಸ್ತ್ರಗಳನ್ನು ಸುಡುತ್ತಿರುವಾಗ ಈ ಮಗ ವಿದೇಶಿ ವಸ್ತ್ರ ಮಾರಾಟ ದಂಧೆಯಲ್ಲಿ ತೊಡಗಿರುತ್ತಾನೆ, ಗಾಂಧಿಯ ಮದ್ಯ ನಿಷೇಧ ಚಳುವಳಿಗೆ ಈ ಮಗ ಕುಡಿತದ ಚಟ ಉತ್ತರವಾಗುತ್ತದೆ. ಹರಿಶ್ಚಂದ್ರನ ಸತ್ಯದ ದಾರಿ ಸ್ವೀಕರಿಸುವ ಗಾಂಧಿಗೆ ಹಿಂದೂತನ ಪ್ರಿಯವಾದರೆ, ಈ ಮಗ ಮುಸ್ಲಿಂ ಆಗಿ ಮತಾಂತರ ಹೊಂದುತ್ತಾನೆ. ಹೀಗೆ ಗಾಂಧಿಯ ಪ್ರಯತ್ನಗಳಿಗೆಲ್ಲಾ ಹರಿಲಾಲ ಸವಾಲನ್ನೆಸೆಯುತ್ತಾನೆ.

ಆದರೆ ಬೆಳೆದ ಮಗನೊಬ್ಬ ತನ್ನ ಬದುಕನ್ನು ಮೂರಾಬಟ್ಟೆಯಾಗಿಸಿಕೊಳ್ಳುತ್ತಾ ತನ್ನ ತಂದೆಯ ಪ್ರಭಾವದಿಂದಾಚೆಗೆ ಬದುಕುವ, ಸ್ವಂತಿಕೆಯ ನೆಲೆ ಹುಡುಕುತ್ತಾ, ಅದನ್ನು ದಕ್ಕಿಸಿಕೊಳ್ಳುವ ಕುಶಲತೆಯನ್ನು ತೋರದಿದ್ದರೆ ಅದರ ಸಂಪೂರ್ಣ ಹೊಣೆಯನ್ನು ತಂದೆಯ ತಲೆಗೆ ಕಟ್ಟುವುದು ಎಷ್ಟು ಸಾಧು ಎನ್ನುವ ಪ್ರಶ್ನೆ ಪ್ರೇಕ್ಷಕನಿಗೆ ಎದುರಾಗುತ್ತದೆ.

'ಗಾಂಧಿ ವರ್ಸಸ್ ಗಾಂಧಿ'ಯ ಟೆಕ್ಸ್ಟ್‌ನಲ್ಲಿಯೇ ಎದ್ದು ಕಾಣುವ ಗೊಂದಲಮಯ ಪಾತ್ರವೆಂದರೆ 'ಕಸ್ತೂರಿಬಾ' ಪಾತ್ರ. ಗಾಂಧೀಜಿಯವರೇ ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿರುವ ಹಾಗೆ, ಮತ್ತು ಆಕೆಯ ಕಾಲದ ಇತರ ಸತ್ಯಾಗ್ರಹಿಗಳ ಬರಹದ ಮೂಲಕ ಕಸ್ತೂರಿಬಾರ ವ್ಯಕ್ತಿತ್ವ ಹೇಗಿದ್ದಿರಬಹುದೆನ್ನುವ ಕಲ್ಪನೆಯನ್ನು ಚರಿತ್ರೆ ನಮಗಾಗಲೇ ಕಟ್ಟಿಕೊಟ್ಟುಬಿಟ್ಟಿದೆ. ಕಸ್ತೂರಿ ಬಾರ ಬಗ್ಗೆ ಚಿಂತಿಸುವಾಗ ಆಕೆಯ ಕಾಲದ ಇತರ ಹೆಣ್ಣುಗಳ ಬದುಕಿನ ಬಗ್ಗೆಯೂ ಚಿಂತಿಸಬೇಕಾಗುತ್ತದೆ. ನಿರಕ್ಷರಕುಕ್ಷಿಯಾದ ಹೆಣ್ಣು, ಅತಿ ವಿದ್ಯಾವಂತ ಗಂಡುಗಳ ನಡುವೆ ವಿವಾಹವೇರ್ಪಡುತ್ತಿದ್ದುದು ಅತ್ಯಂತ ಸಹಜವಾಗಿದ್ದ ಕಾಲವದು. ಹೆಚ್ಚು ಕಡಿಮೆ ಬಾಲ್ಯವಿವಾಹವೆನ್ನಬಹುದಾದ ವಯಸ್ಸಿನಲ್ಲಿ ಮದುವೆ. ಗಂಡನ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು ನಡೆಯುವ ಬದುಕು. ಇವು ಆ ಕಾಲದ ಮಹಿಳೆಯರಿಗೆ ಲಭ್ಯವಾಗುತ್ತಿದ್ದ ಜೀವನ. ಇದಕ್ಕೆ ಕಸ್ತೂರಿಬಾ ಹೊರತಾಗಿರಲಿಲ್ಲ. ಕಸ್ತೂರಿಬಾ ಮಹತ್ವದ ಮಹಿಳೆಯಾಗುವುದು ಆಕೆಯ ಪ್ರತಿಭಟನೆಯ, ಸಂಘರ್ಷಗಳ ಕ್ಷಣಗಳಲ್ಲಿ ಮಾತ್ರ. ಆಫ್ರಿಕಾದಲ್ಲಿ ಹರಿಜನನೊಬ್ಬನ ಮಲ ಹೊರಲು ಗಂಡ ಹೇಳಿದಾಗ, ಚಳವಳಿಯ ಧನ ಸಂಗ್ರಹಗಳಿಗೆ ಆಕೆಯ ತೌರಿನಿಂದ ಬಂದ ಒಡವೆಗಳನ್ನು ಕೇಳಿದಾಗ, ವಿದೇಶೀ ವಸ್ತ್ರಗಳನ್ನು ಸುಡುವ ಪ್ರತಿಜ್ಞೆ ಗಂಡ ಮಾಡಿ, ಇತರ ಮಹಿಳೆಯರು ಸಂಭ್ರಮಿಸುತ್ತಿದ್ದಾಗ ಈಕೆ ಪಕ್ಕದ ಕೋಣೆಯಲ್ಲಿ ತನ್ನ ವಿದೇಶಿ ವಸ್ತ್ರಗಳನ್ನು ಹಿಡಿದು 'ಕೊಡುವುದಿಲ್ಲ'ವೆಂದು ಹಠ ಮಾಡಿದಾಗ, ಆಕೆ ಅತ್ಯಂತ ಸಹಜವಾದ ಮಹಿಳೆಯಾಗಿಬಿಡುತ್ತಾರೆ. ಆದರೆ ಆಕೆ ಮುಖ್ಯರಾಗುವುದು ಈ ಘಟನೆಗಳ ನಂತರ ಗಾಂಧೀಜಿಯವರ ಹಠಕ್ಕೆ ಮಣಿದು ಅವರಂತೆ ನಡೆದುಕೊಂಡರೂ, ಅನಂತರ ಅದನ್ನೇ ರೂಢಿ ಮಾಡಿಕೊಳ್ಳುವ ಆಕೆಯ ಪ್ರಯತ್ನ ಕಡಿಮೆಯದೇನಲ್ಲ. ಜಗತ್ತಿನಲ್ಲಿ ರೂಢಿಯಲ್ಲಿರುವ ನಡವಳಿಕೆಗಳನ್ನು ಹೊಂದಿರುವ ಗಂಡ ಹೆಂಡಿರಲ್ಲೇ ಸಾಂಸ್ಕೃತಿಕ ಸಂಘರ್ಷಗಳು ಅಪಾರವಾಗಿರುವಾಗ ಇನ್ನು ಪ್ರಪಂಚಕ್ಕೆ ಹೊಸ ದಾರಿ ಸೃಷ್ಟಿಸ ಹೊರಟ ಈ ಯೋಗಿ ಮಹಾತ್ಮನ ಹೆಂಡತಿಯಾಗಿ ಬದುಕುವುದು ಸುಲಭದ ಮಾತೇನಲ್ಲ. ಆದರ್ಶದ ಹುಚ್ಚುಹೊಳೆ ಹರಿದ ನೆಲದಲ್ಲಿ ಈ ಕನಸುಗಾರನ ಅಗಲವಾದ ಹೆಜ್ಜೆಗಳೊಳಗೆ ಆಕೆ ತನ್ನ ಪುಟ್ಟ ಪಾದಗಳನ್ನು ಸೇರಿಸಿದ್ದೇ ಒಂದು ಕೌತುಕ.

ಗಂಡನ ಬಗ್ಗೆ ಆಕೆಗೆ ಸಿಟ್ಟಿತ್ತು ಎನ್ನುವುದಾಗಲೀ, ಅದಕ್ಕಾಗಿ ಆಕೆ ಮಕ್ಕಳನ್ನು ಗಂಡನ ವಿರುದ್ಧ ಎತ್ತಿಕಟ್ಟುವ ಸಣ್ಣತನ ತೋರಿದರೆಂದಾಗಲೀ, ತನ್ನ ಕಡೆಗಾಲದಲ್ಲಿ ''ನಾನು ನನ್ನ ಗಂಡನ ಜೀವನಕ್ಕೆ ಹೊಂದಿಕೊಂಡೆ ನನಗೆ ಅವರ ಮೇಲೆ ಕೋಪವಿಲ್ಲ ಎಂದು ಹರಿಲಾಲನಿಗೆ ಹೇಳಿ'' ಎನ್ನುವ ಮಾತಾಗಲೀ, ಒಪ್ಪುವುದು ಕಸ್ತೂರಿಬಾ ಅಂತಹ ಹಿರಿಜೀವಕ್ಕೆ ಮುಂದಿನ ಪೀಳಿಗೆಯವರು ಮಾಡುವ ಅನ್ಯಾಯ. ಮಹಿಳೆಯ ಸಹನೆಗೆ, ತ್ಯಾಗಕ್ಕೆ ಎಲ್ಲಕ್ಕಿಂತ ಹೆಚ್ಚಾಗಿ ಹೊಂದಿಕೊಳ್ಳುವ ಗುಣಕ್ಕೆ ಬೇರೆಯದೇ ಆದ ಮಾನದಂಡಗಳನ್ನು ಸೃಷ್ಟಿಸಬೇಕು. ಮಹಿಳೆಯನ್ನು ಅಳೆಯುವ ರೂಢಿಯಲ್ಲಿರುವ ಮಾನದಂಡಗಳೆಲ್ಲಾ ಪುರುಷ ನಿರ್ಮಿತವೆ. ಸಣ್ಣತನಗಳನ್ನೆಲ್ಲಾ ಮಹಿಳೆಯ ಮೇಲೆ ಆರೋಪಿಸುವವರು 'ಗಾಂಧಿ ವರ್ಸಸ್ ಗಾಂಧಿ' ನಾಟಕದ ಕಸ್ತೂರಿಬಾದಂಥ ಪಾತ್ರವನ್ನು ಸೃಷ್ಟಿಸುತ್ತಾರಷ್ಟೆ. ಅಷ್ಟೇ ಅಲ್ಲ ಇಂತಹ ವಿರೂಪಗೊಳಿಸಿದ ಗೋಜಲು ಪಾತ್ರದ ನಾಟಕದ ವಸ್ತುವೂ ರಂಗಾಯಣದ ಪರಿಪಕ್ವ ನಟ-ನಟಿಯರ ಅಭಿನಯದಿಂದ 'ಯಶಸ್ವಿ'ಯೆಂಬ ಹಣೆಪಟ್ಟಿ ಹೊತ್ತದ್ದು ಮತ್ತೊಂದು ದುರಂತ. ●

# ಸುವರ್ಣ ಸ್ವಾತಂತ್ರ್ಯೋತ್ಸವದ ವರ್ಷದಲ್ಲೊಂದು ಕಪ್ಪುಚುಕ್ಕೆ

ಭಾರತ ತನ್ನ ಸುವರ್ಣ ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ಈ ಸ್ವಾತಂತ್ರ್ಯಕ್ಕೆ ಕಾರಣಪುರುಷನಾದ ಗಾಂಧಿಯ ಮೂಲಮಂತ್ರವನ್ನೇ ಮರೆತಿದೆ. ಗಾಂಧಿಯನ್ನು ಕೊಂದ ಜನರ ಸಂತತಿಯೇ ಇಂದು ದೇಶವನ್ನು ಆಳುತ್ತಿರುವಾಗ 'ಹಿಂಸೆಯ ವೈಭವ' ಅವರ ಪೌರುಷದ, ಸಾಧನೆಯ ಹೆಗ್ಗಳಿಕೆಯ ಸೂಚಕವಾಗಿದೆ. ಇಂದು ಬಿಜೆಪಿ ಸರ್ಕಾರದ ಹೆಗ್ಗಳಿಕೆಯ 'ಬಾಂಬ್‌ಸ್ಫೋಟ' ಭಾರತ ಹಿಂದಿನಿಂದಲೂ ಅನುಸರಿಸಿಕೊಂಡು ಬಂದ ನಿಶ್ಶಸ್ತ್ರೀಕರಣದ ಅಲಿಪ್ತನೀತಿಯ ಪರಂಪರೆಗೆ ಭಾರಿ ಪೆಟ್ಟು ಕೊಟ್ಟಿದೆ.

ಹಿಂದುತ್ವದ ಮಂತ್ರದಿಂದ ಗದ್ದುಗೆಯೇರಿರುವ ಸರ್ಕಾರದ ಸ್ವದೇಶಿ ಬಾಂಬಿನ ಸ್ಫೋಟಕ್ಕೆ ಮೊದಲ ಬಲಿಯಾಗುವುದು ದೇಶದ ಪ್ರಜಾಪ್ರಭುತ್ವ. ಇದರಿಂದಾಗಿ ಐವತ್ತು ವರ್ಷಗಳ ಹಿಂದೆ ಒಂದೇ ರಾಷ್ಟ್ರಕ್ಕೆ ಸೇರಿದ್ದ ಎರಡು ದೇಶಗಳು ಅಣುಪರೀಕ್ಷೆಗಳನ್ನು ನಡೆಸುವುದರ ಮೂಲಕ ಪರಸ್ಪರ ಕಾದಾಡಲು ಪ್ರಾರಂಭಿಸಿವೆ. ಭಾರತದ ನಾಯಕರು ತಮ್ಮ ನೆರೆದೇಶಕ್ಕೆ ಎಚ್ಚರಿಕೆ ನೀಡುವುದರೊಂದಿಗೆ ತಮ್ಮ ಅಣ್ವಸ್ತ್ರ ಸಾಧನೆಯ ನೀತಿ ಘೋಷಿಸಿದರೆ, ಪಾಕಿಸ್ತಾನದ ನಾಯಕರು ತಾವು ಸರಿಯಾದ ಪ್ರತ್ಯುತ್ತರ ನೀಡಿದ್ದೇವೆಂದು ಹೆಮ್ಮೆಯಿಂದ ಬೀಗುತ್ತಿದ್ದಾರೆ.

ಅಮೇರಿಕಾ ದೇಶವು ಪಾಕಿಸ್ತಾನ ಮತ್ತು ಭಾರತ ಎರಡೂ ದೇಶಗಳ ಮೇಲೆ ಆರ್ಥಿಕ ದಿಗ್ಬಂಧನ ಹೇರಿದರೆ, ವಿಶ್ವಸಂಸ್ಥೆಯ ಭದ್ರತಾ ಮಂಡಳಿಯು ಭಾರತ ಮತ್ತು ಪಾಕಿಸ್ತಾನ ಯಾವುದೇ ಪೂರ್ವ ಷರತ್ತುಗಳಿಲ್ಲದೆ ಸಿಟಿಬಿಟಿ ಮತ್ತು ಎನ್.ಬಿ.ಟಿ.ಗೆ ಸಹಿ ಹಾಕಬೇಕೆಂಬ ತಾಕೀತು ಮಾಡಿದೆ. ಪೋಖ್ರಾನ್‌ನಲ್ಲಿ ನಡೆಸಿದ ಬಾಂಬ್ ಪರೀಕ್ಷೆ ಒಂದು ದೊಡ್ಡ ವೈಜ್ಞಾನಿಕ ಸಾಧನೆ ಎಂದು ಆರಂಭದಲ್ಲಿ ಬಹುತೇಕ ಜನ ಬೀಗಿದ್ದರೂ ನಂತರದ ದಿನಗಳಲ್ಲಿ ಅದು ಪಡೆದುಕೊಳ್ಳುತ್ತಿರುವ ವಿಕೃತಸ್ವರೂಪ ಮತ್ತು ಪರಿಣಾಮಗಳು ಜನರ ಉತ್ಸಾಹವನ್ನು ತಗ್ಗಿಸಿವೆ.

ಐವತ್ತು ವರ್ಷಗಳಿಂದ ಭಾರತ ಶಾಂತಿಪ್ರಿಯದೇಶವೆಂಬ ಹೆಗ್ಗಳಿಕೆಯನ್ನು ಮೆರೆದಿತ್ತು. ಅಂತಹ ಅಭಿಮಾನದ ಪಟ್ಟಕ್ಕೆ ಇಂದು ಮಸಿ ಬಳಿದಿದೆ. ಇಲ್ಲಿಯವರೆಗೂ ಭಾರತ ಮೆರೆದ ಅಣ್ವಸ್ತ್ರ ನಿಶ್ಶಸ್ತ್ರೀಕರಣದ ನಾಯಕತ್ವಕ್ಕೆ ಬರೆ ಎಳೆದಂತಾಗಿದೆ. ಅಂತಹ ಸುವರ್ಣಾವಕಾಶವನ್ನು ಇಂದು ಕಳೆದುಕೊಂಡಿದ್ದೇವೆ

500 ಮಿಲಿಯನ್ ಅನಕ್ಷರಸ್ಥರನ್ನು ಹೊಂದಿರುವ ಭಾರತಕ್ಕೆ ಇಂದು ಬೇಕಾಗಿರುವುದು ಅಕ್ಷರಜ್ಞಾನವೇ ಹೊರತು ಅಣುಬಾಂಬಲ್ಲ. 40 ಕೋಟಿ ಜನಗಳಿಗಿಂತಲೂ ಹೆಚ್ಚು ಜನ ಬಡತನದ ರೇಖೆಯ ಕೆಳಗಿರುವಾಗ ಹಸಿವು, ರೋಗ ರುಜಿನಗಳು, ಅಜ್ಞಾನ ದೇಶದ ಜನತೆಯನ್ನು ಕಿತ್ತುತಿನ್ನುತ್ತಿರುವಾಗ ಇಂದು ದೇಶಕ್ಕೆ ಬೇಕಾಗಿರುವುದು ಈ ಎಲ್ಲ ಸಮಸ್ಯೆಗಳನ್ನು ಬುಡಮೇಲು ಮಾಡಬಲ್ಲಂತಹ ರಾಜಕೀಯ ಸಂಕಲ್ಪ ಮತ್ತು ಕ್ರಿಯಾಶೀಲತೆ. ಇದರ ಬದಲಿಗೆ ಅಧಿಕಾರದಲ್ಲಿರುವ ಸರ್ಕಾರ ಬಾಂಬ್ ಸ್ಫೋಟದಿಂದ ಬೀಗುತ್ತಿದೆ. ಕೋಮು ಗಲಭೆಗೆ ಉರಿ ಹಚ್ಚಲು ದೇವಾಲಯ ಕಟ್ಟುತ್ತಿದೆ. ತನ್ನ ಈ ಸಾಧನೆಯ ಶತದಿನೋತ್ಸವದ ಆಚರಣೆಯಲ್ಲಿ ದೇಶದ ಹಿತವನ್ನು ಬಲಿಕೊಟ್ಟಿದೆ.

ಇಂದು ಮಹಿಳಾ ಚಳುವಳಿ ಮತ್ತು ಮಹಿಳಾ ಹೋರಾಟ ಒಕ್ಕೊರಲಿನಿಂದ ಸರ್ಕಾರದ ಈ ಕೃತ್ಯವನ್ನು ಪ್ರತಿಭಟಿಸಬೇಕಿದೆ. ಅಣ್ವಸ್ತ್ರ ಪರೀಕ್ಷೆಯು ಆಧುನಿಕ ವಿಜ್ಞಾನದ ಪುರುಷಪ್ರಾಧಾನ್ಯ ಯೋಜನೆಗಳ ಫಲವಾಗಿದೆ. ಅದು ದೇಶದ ನೈಸರ್ಗಿಕ ಸಂಪತ್ತನ್ನಾಗಲಿ, ಮಾನವ ಸಂಪನ್ಮೂಲವನ್ನಾಗಲೀ ಗಣನೆಗೆ ತೆಗೆದುಕೊಳ್ಳದೆ ಭಸ್ಮಾಸುರನಂತೆ ವರ್ತಿಸುತ್ತಿದೆ. ಪ್ರಕೃತಿಯನ್ನು ಸಂರಕ್ಷಿಸುವ, ಸಮೃದ್ಧಿಸುವ ಮುಖ್ಯ ಹೊಣೆಯನ್ನು ಹೊತ್ತ ಹೆಣ್ಣು ಇಂದು ಅಣ್ವಸ್ತ್ರವು ಯಾವುದೇ ದೇಶದ, ನೆಲದ ಭಾಗದಲ್ಲಿರಲಿ ಅದನ್ನು ವಿರೋಧಿಸುವ ನೆಲೆಯಲ್ಲೇ ನೋಡಬೇಕಿದೆ. ಹಿರೋಷಿಮಾ, ನಾಗಸಾಕಿಯ ಬಾಂಬ್ ದುರಂತದ ಕಹಿ ಪರಿಣಾಮವನ್ನು ಇಂದಿಗೂ ಅಲ್ಲಿನ ಮಹಿಳೆಯರು ವಿಶೇಷವಾಗಿ ಅನುಭವಿಸುತ್ತಿರುವುದು ಮಹಿಳೆಯ ಅನುಭವದ ಬುತ್ತಿಯಲ್ಲಿದೆ.

ಯುನೈಟೆಡ್ ನೇಷನ್ಸ್ ಸಮಾವೇಶದಲ್ಲಿ 'ಮಹಿಳೆ ಮತ್ತು ಪರಿಸರ'ವನ್ನು ಕುರಿತಂತೆ ನಡೆದ ವಿಚಾರ ಸಂಕಿರಣದಲ್ಲಿ ವಿಶ್ವದ ವಿವಿಧ ಕಡೆಗಳಿಂದ ಬಂದ ಮಹಿಳೆಯರು ನೀಡಿದ ಕರೆಯನ್ನು ಈ ಸಂದರ್ಭದಲ್ಲಿ ನೆನೆಸಿಕೊಳ್ಳಬೇಕು- ''ಮಾರುಕಟ್ಟೆಯ ಲೆಕ್ಕಾಚಾರದಲ್ಲಿ ನಶಿಸಿ-ಹೋಗುತ್ತಿರುವ ಮಹಿಳೆಯರ ಮತ್ತು ಪ್ರಕೃತಿಯ ಘನತೆ ಮತ್ತು ಅಸ್ತಿತ್ವವನ್ನು ಪುನರ್‌ಸ್ಥಾಪಿಸುವ ಕಾರ್ಯದಲ್ಲಿ ನಾವು ಗಂಭೀರವಾಗಿ ತೊಡಗುತ್ತೇವೆ.... ಪರಿಸರದ ಚೌಕಟ್ಟಿನಲ್ಲಿ ನಾವು ಸಂಪತ್ತನ್ನು ಪುನರ್ವ್ಯಾಖ್ಯಾನಿಸುತ್ತೇವೆ. ಜನರ ರಕ್ಷಣೆಯ ದೃಷ್ಟಿಯಲ್ಲಿ 'ಶಾಂತಿ'ಯ ಪರಿಕಲ್ಪನೆಯನ್ನು ಮತ್ತು ಮನುಷ್ಯನ ಮೂಲಭೂತ ಅಗತ್ಯಗಳ ಪೂರೈಕೆಯ ಹಿನ್ನೆಲೆಯಲ್ಲಿ 'ಪ್ರಗತಿ'ಯ ವ್ಯಾಖ್ಯೆಯನ್ನು ಬದಲಿಸುತ್ತೇವೆ.''

ಹೀಗೆ ಪುರುಷ ಪ್ರಧಾನ ಸಮಾಜ ಸೃಷ್ಟಿಸಿರುವ ಹಲವಾರು ಕಪ್ಪು ಚುಕ್ಕೆಗಳನ್ನು ಅಳಿಸಿ ಹೊಸ ಮಾನವೀಯ, ಶಾಂತಿ, ನೆಮ್ಮದಿಯ ಸಮಾಜದ ಗುರಿಯತ್ತ ಮಹಿಳಾ ಹೋರಾಟ ಸಾಗಬೇಕಾಗಿದೆ.

-ಎನ್. ಗಾಯತ್ರಿ

# 'ರುಡಾಲಿ' - ಒಂದು ಚಿಂತನೆ

-ಶಾಂತಾ ನಾಗರಾಜ್

ಜ್ಞಾನಪೀಠ ಪ್ರಶಸ್ತಿ ವಿಜೇತೆ, ಶ್ರೀಮತಿ ಮಹಾಶ್ವೇತಾದೇವಿಯವರ ಮೂರು ವಿಭಿನ್ನ ಕತೆಗಳನ್ನು ಆರಿಸಿ 'ನಾಟಕ'ದ ರೂಪದಲ್ಲಿ ಹೆಣೆದಿರುವ 'ರುಡಾಲಿ' ಸಮುದಾಯ ತಂಡದ ಒಂದು ಪ್ರಯತ್ನ. ಮಹಾಶ್ವೇತಾದೇವಿ ಯಶಸ್ವೀ ಬರಹಗಾರ್ತಿ ಅಷ್ಟೇ ಅಲ್ಲ, ಬುಡಕಟ್ಟು ಜನಾಂಗದ ಒಳಿತಿಗಾಗಿ ಹಗಲಿರುಳೂ ಶ್ರಮಿಸುತ್ತಿರುವ ಯಶಸ್ವೀ ಸಮಾಜಸೇವಕಿಯೂ ಹೌದು. ಆದ್ದರಿಂದಲೇ ಅವರು ಕತೆಗಳಲ್ಲಿ, ಬುಡಕಟ್ಟು ಜನಾಂಗದ, ಕೆಳವರ್ಗದ ಮಹಿಳೆಯರ ಸೂಕ್ಷ್ಮಾತಿಸೂಕ್ಷ್ಮ ಒಳತೋಟಿಗಳನ್ನೂ ತುಂಬ ಸಮರ್ಥವಾಗಿ ಚಿತ್ರಿಸುತ್ತಾರೆ. ಇಂಥ ಗ್ರಹಿಕೆಗಳನ್ನು ನಾಟಕದ ಪ್ರಕಾರಕ್ಕೆ ತರುವಾಗ ತನ್ನ ಮೊನಚುಗಳನ್ನೆಲ್ಲಾ ಕಳೆದುಕೊಂಡು ಮೊಂಡಾಗುವ ಸಾಧ್ಯತೆ ಇದೆ.

'ರುಡಾಲಿ' ನಾಟಕದಲ್ಲಿ ಮಹಾಶ್ವೇತಾದೇವಿಯವರ ಮೂರು ಭಿನ್ನ ಸ್ತ್ರೀಪ್ರಧಾನ ಕತೆಗಳಿವೆ. ಭಿನ್ನ ನೆಲೆಗಳಲ್ಲಿ ಸಂಕಷ್ಟಕ್ಕೆ ಒಳಗಾದ ಮೂವರ ಮಹಿಳೆಯರ ವಿಭಿನ್ನ ಅನುಭವಗಳನ್ನು ಪರಿಚಯಿಸುತ್ತಲೇ ಅವರನ್ನು ಒಂದುಗೂಡಿಸಿ ಒಟ್ಟಾಗಿ ಹೋರಾಟಕ್ಕೆ ಅಣಿಗೊಳಿಸಬೇಕೆಂಬ ನಾಟಕಕಾರರ ಸದಾಶಯ ಸ್ವಾಗತಾರ್ಹ. ಆದರೆ ಈ ಮಹತ್ವಾಕಾಂಕ್ಷೆ ನಾಟಕದ ಸ್ಕ್ರಿಪ್ಟ್‌ನಲ್ಲಿ ಸಮರ್ಥವಾಗಿ ಮೂಡಿಬರದೆ ನಿರಾಶೆ ಹುಟ್ಟಿಸುತ್ತದೆ.

ಮಹಿಳೆಯರ ಸಂಕಷ್ಟಗಳನ್ನು ನಿರ್ದೇಶಕರು ಗ್ರಹಿಸಿರುವ ರೀತಿಯನ್ನು ಕುರಿತಂತೆ ಒಂದು ಮಾತು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರ ಜೀವನಾಶವೂ ಸಹ (ವಧೂದಹನ, ಸತಿಪದ್ಧತಿ, ಹೆಣ್ಣುಭ್ರೂಣಹತ್ಯೆ) ಅಮಾನುಷ ರೀತಿಯಲ್ಲಿ, ಪ್ರಾಮುಖ್ಯತೆಯನ್ನೇ ನೀಡದೆ ಅದೇ ನ್ಯಾಯವೆಂಬಂತೆ ಸಹಿಸಿಕೊಳ್ಳಲಾಗುತ್ತಿದೆ. ಹೆಣ್ಣಿನ ಜೀವವೇ ಅಮುಖ್ಯ ಎಂದು ಪರಿಗಣಿಸುವಾಗ ಅವಳ ಸಮಸ್ಯೆಗಳು, ನೋವುಗಳು, ದುಃಖಗಳು, 'ಏನೂ ಅಲ್ಲವೇ ಅಲ್ಲ' ಎನ್ನುವ ನಿಲುವಿಗೋ, ಅಥವಾ ಅಪಹಾಸ್ಯಕ್ಕೋ ಗುರಿಯಾಗುತ್ತದೆ. ಈ ನಾಟಕದಲ್ಲಿ ಮೇಲ್ನೋಟಕ್ಕೆ 'ಇದು ಮಹಿಳೆಯರ ಬಗ್ಗೆ' ಎನ್ನುವ 'ಬ್ಯಾನರ್' ಕಾಣಿಸಿದರೂ, ಪ್ರದರ್ಶನದ ನಂತರ ಸ್ತ್ರೀಪರ ಕಳಕಳಿಯಿರುವ ಪ್ರೇಕ್ಷಕರಲ್ಲಿ ಉಳಿಯುವ ಪ್ರಶ್ನೆ ನಿಜವಾಗಿ ಈ ನಾಟಕದ ಧ್ವನಿಯಾವುದು ? ಸ್ತ್ರೀಯರ ಬಗ್ಗೆ ಅವಜ್ಞೆಯೇ ? ಅಪಹಾಸ್ಯವೇ ? -ಎಂಬುದು.

ಬೇರೆ ಬೇರೆ ಪರಿಧಿಯಲ್ಲಿ ಸುತ್ತುವ ಮೂರು ಮಹಿಳೆಯರು, ತಮ್ಮಂತೆಯೇ ತೊಳಲಾಡುವ ಮಹಿಳೆಯರ ಗುಂಪನ್ನು ಕಟ್ಟಿಕೊಂಡು ಕೊನೆಗೆ 'ರುಡಾಲಿ' (ಸತ್ತವರ ಮುಂದೆ ಬಾಡಿಗೆಗಾಗಿ ಅಳುವವರು)ಗಳಾಗುತ್ತಾರೆ. ರುಡಾಲಿಗಳಾಗುವ ಕ್ರಿಯೆಯನ್ನೂ, ಅವರು 'ಅಳುವ' ನಡವಳಿಕೆಯನ್ನೂ ತೀರಾ ಹಾಸ್ಯದ ನೋಟದಲ್ಲಿ ಪ್ರತಿಪಾದಿಸಲಾಗಿದೆ. ನಾಟಕದಲ್ಲಿ ಮೊದಲಿನಿಂದ ಕಟ್ಟಿಕೊಂಡು ಬಂದಿದ್ದ ಗಂಭೀರ ಚಿಂತನೆಗಳು ಟೊಳ್ಳುಗಳಾಗಿ ಸಿಡಿದು ಅದರ ಜಾಗದಲ್ಲಿ ನಗು ನಿಂತು, ಈ ನಿರ್ದೇಶಕರ ಒಟ್ಟು ಪ್ರಯತ್ನ ಪ್ರೇಕ್ಷಕರನ್ನು ನಗಿಸುವುದೇ ಆಗಿದೆಯೇ ? ಅಥವಾ ಮಹಿಳೆಯ ಗಂಭೀರ ಸಮಸ್ಯೆಗೆ 'ಗೇಲಿ'ಯೇ ಪರಿಹಾರವೇ ? ಎನ್ನುವ ಪ್ರಶ್ನೆ ನಮ್ಮಂತಹವರನ್ನು ಕಾಡುತ್ತದೆ.

ಇತ್ತೀಚೆಗೆ ತೆರೆಕಂಡ ಯಶಸ್ವೀ ಚಲನಚಿತ್ರ 'ರುಡಾಲಿ' ಅಯಾಚಿತವಾಗಿ ನೆನಪಿಗೆ ಬರುತ್ತದೆ. ಡಿಂಪಲ್‌ಕಪಾಡಿಯಾ, ರಾಖಿಯಂಥ ಪಕ್ವ ನಟಿಯರು ಆ ಚಿತ್ರವನ್ನು ಮರೆಯಲಾರದ ಗಾಢ ಅನುಭವವಾಗಿಸುತ್ತಾರೆ. ಕೊನೆಯಲ್ಲಿ ಒಂದು ಸಂಭಾಷಣೆ ಇದೆ. ರುಡಾಲಿಗೆ ''ಅಳುವುದಕ್ಕೆ ಕೃತಕ ಕಣ್ಣೀರಿಗಾಗಿ ಕಣ್ಣಿಗೆ ಅಂಜನ ಬೇಕೇ'' ಎಂದು ತಾಯಿ ಕೇಳುತ್ತಾಳೆ. ಅದಕ್ಕವಳುತ್ತರ ''ಅದೇಕೆ ನಾನು ಇಡೀ ಬದುಕಿನಲ್ಲಿ ಗಳಿಸಿದ ನೋವಿನುಂಡೆಗಳು ನನ್ನೆದೆಯಲ್ಲಿದೆ ಅದನ್ನೇ ಕರಗಿಸಿ ಕಣ್ಣೀರು ಮಾಡುತ್ತೇನೆ'' ಎಂದು. ತನಗೆ ಅಳುವುದಕ್ಕೆ ಆಗುತ್ತದೋ ಇಲ್ಲವೋ ಎನ್ನುವ ಅನುಮಾನದಲ್ಲೇ ಅಳು ಪ್ರಾರಂಭಿಸುವ ರುಡಾಲಿ ಕೊನೆಗೆ ಹೇಗೆ ಅಳುತ್ತಾಳೆಂದರೆ ಅಳು ಅವಳ ಹೊಟ್ಟೆಯೊಳಗಿಂದ ಉಕ್ಕುಕ್ಕಿ ಬಂದು ಭೋರ್ಗರೆಯುತ್ತಾ ನಿಜವಾಗಿಯೂ ಅಲ್ಲಿ ಸತ್ತು ಬಿದ್ದಿರುವುದು ಜಮೀನ್ದಾರನ ಹೆಣವಲ್ಲ, ಅವಳದೇ ಇಡೀ ಬದುಕೇನೋ ಎನ್ನಿಸಿಬಿಡುವಂತೆ ಅಳುತ್ತಾಳೆ. ಈ ಚಿತ್ರ ಮುಗಿದಾಗ ಥಿಯೇಟರ್‌ನಲ್ಲಿ ಹೆಂಗಸರಷ್ಟೇ ಅಲ್ಲ ಗಂಡಸರೂ ಅಳುತ್ತಿದ್ದುದನ್ನು ನಾನು ಗಮನಿಸಿದೆ.

ಆದರೆ 'ರುಡಾಲಿ' ನಾಟಕದ ಕೊನೆಯಭಾಗದಲ್ಲಿ ಪ್ರೇಕ್ಷಕರೆಲ್ಲರೂ ಬಿದ್ದುಬಿದ್ದು ನಗುತ್ತಿದ್ದುದು ನನಗೆ ತೀರಾ ಅಸಹನೀಯವೆನಿಸಿತು. ●

*- 15ನೇ ಪುಟದಿಂದ ಮುಂದುವರೆದಿದ್ದು-*

ಮರಳಿದರು. 1936ರಲ್ಲಿ ತೀವ್ರ ಅನಾರೋಗ್ಯದ ನಂತರ ಸಾವನ್ನಪ್ಪಿದರು. 1936ರ ಆಗಸ್ಟ್ 23ರ ಕೈಸರ್-ಇ-ಹಿಂದ್ ಪತ್ರಿಕೆಯ ಸಂಚಿಕೆಯಲ್ಲಿ ಮೇಡಂ ಕಾಮರವರ ನಿಧನಕ್ಕೆ ಶ್ರದ್ಧಾಂಜಲಿ ಅರ್ಪಿಸುತ್ತಾ ಶ್ರೀ ಹರೀಂದ್ರ ಚಟ್ಟೋಪಾಧ್ಯಾಯ ಹೀಗೆ ಬರೆದಿದ್ದಾರೆ : ''ಭಾರತದ ಶ್ರೇಷ್ಠ ಮಹಿಳೆಯೊಬ್ಬಳು ಇಂದು ನಿಧನ ಹೊಂದಿದ್ದಾರೆ. ಈ ಮಹನೀಯಳನ್ನು ಕುರಿತು ಬಲ್ಲವರು ಈ ದೇಶದಲ್ಲಿ ಕೆಲವರೇ ಇರಬಹುದು. ಆದರೆ ಇಂಗ್ಲೆಂಡ್, ಫ್ರಾನ್ಸ್ ಮತ್ತು ಜರ್ಮನಿಯಲ್ಲಿ ಅಲ್ಲಿನ ಕ್ರಾಂತಿಕಾರಿಗಳ ವಲಯದಲ್ಲಿ ಬಹುದೊಡ್ಡ ಹೆಸರಾಗಿ ವಿಜೃಂಭಿಸಿದವರು ಮೇಡಂ ಕಾಮಾ''. 'ಭಾರತದ ಕ್ರಾಂತಿಯ ಮಹಾಮಾತೆಯೆನಿಸಿಕೊಂಡ ಕಾಮಾ ಭಾರತೀಯ ಮಹಿಳೆಯರ ಹೆಮ್ಮೆಯೂ ಹೌದು. ●




## ಸ್ವಾತಂತ್ರ್ಯ ಹೋರಾಟದ ಕ್ರಾಂತಿಕಾರಿ ಮಹಿಳೆಯರ ಅಪೂರ್ವ ಸಂಗಮ

ಜೂನ್ 11 ಬೆಂಗಳೂರಿನ ಟೌನ್‌ಹಾಲ್‌ನಲ್ಲಿ ವೀರವನಿತೆ ಗೋದಾವರಿ ಪರುಳೇಕರ್ ಹೆಸರಿನ ವೇದಿಕೆಯಲ್ಲಿ ಮಹಿಳೆಯರ ಅಪರೂಪದ ಕಾರ್ಯಕ್ರಮ. ಭಾರತದಲ್ಲಿ ಮಹಿಳಾ ಚಳುವಳಿಯನ್ನು ಆರಂಭಿಸಿದ, ಬೆಳೆಸಿದ, ಬೆಳೆಸುತ್ತಿರುವ ಮಹಿಳಾನಾಯಕಿಯರಲ್ಲಿ ಹಲವಾರು ಮಂದಿಯನ್ನು ಒಟ್ಟಾಗಿ ನೋಡುವ ಅವಕಾಶ ಬೆಂಗಳೂರಿಗೆ ದೊರೆತ ಅಪರೂಪದ ಸನ್ನಿವೇಶ. ಸುವರ್ಣ ಸ್ವಾತಂತ್ರ್ಯೋತ್ಸವದ ಆಚರಣೆ ನಡೆಯುತ್ತಿರುವ ಈ ಸಂದರ್ಭದಲ್ಲಿ ಭಾರತದ ದೊಡ್ಡ ಮಹಿಳಾ ಸಂಘಟನೆಗಳಲ್ಲೊಂದಾದ ಅಖಿಲಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ ಐದನೆಯ ರಾಷ್ಟ್ರೀಯ ಸಮಾವೇಶವು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿ ಇಂದಿಗೂ ಸಕ್ರಿಯವಾಗಿ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಮಹಾನ್‌ನಾಯಕಿಯರ ಸೇವೆಯನ್ನು ಗುರುತಿಸಿ, ಗೌರವಿಸಿ, ಸನ್ಮಾನಿಸುವ ಕಾರ್ಯಕ್ರಮದೊಂದಿಗೆ ಅಖಿಲ ಭಾರತ ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆಯ 5ನೇಯ ರಾಷ್ಟ್ರೀಯ ಸಮಾವೇಶ ಆರಂಭವಾಯಿತು.

ಈ ಸಮಾವೇಶವನ್ನು ಉದ್ಘಾಟಿಸಿದ ಈ ಸಂಸ್ಥೆಯ ರಾಷ್ಟ್ರಾಧ್ಯಕ್ಷೆ ಮತ್ತು ಕೇರಳದ ಮಂತ್ರಿಯೂ ಆಗಿರುವ ಶ್ರೀಮತಿ ಸುಶೀಲಾ ಗೋಪಾಲನ್ ಉದಾರೀಕರಣ ನೀತಿಯ ಹೊಡೆತ ಮತ್ತು ಕೋಮುವಾದಿಗಳ ಅಬ್ಬರದ ದಾಳಿಯನ್ನು ಮಹಿಳೆಯರು ಎದುರಿಸಿ ಹೋರಾಟ ನಡೆಸಬೇಕೆಂದು ಮಹಿಳೆಯರಿಗೆ ಕರೆಯಿತ್ತರು. ಕಿಕ್ಕಿರಿದ ಜನಸಮೂಹವನ್ನೊಳಗೊಂಡ ಸಭಾಂಗಣದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ವೀರವನಿತೆಯರಿಗೆ ಸನ್ಮಾನ ನಡೆದಾಗ ಬೃಹತ್ ಕರತಾಡನ ಹಾಗೂ ಘೋಷಣೆಗಳ ಸುರಿಮಳೆಯಾಯಿತು. ದೇಶದ ವಿವಿಧ ಭಾಗಗಳಿಂದ ಬಂದ ಪ್ರತಿನಿಧಿಗಳ ಸಂತಸದ, ಸಂಭ್ರಮದ ವಾತಾವರಣವನ್ನು ಮೂಡಿಸಿದರು. ಈ ವರ್ಷ "ಭಾರತರತ್ನ" ಪ್ರಶಸ್ತಿ ಪಡೆದ, ಸುಭಾಶ್‌ಚಂದ್ರಭೋಸರ ಸೈನ್ಯದಲ್ಲಿ ಝಾನ್ಸಿರಾಣಿ ರೆಜಿಮೆಂಟಿನ ಕ್ಯಾಪ್ಟನ್ ಲಕ್ಷ್ಮಿ ಸೆಹಗಾಲ್, ಕಾರ್ಮಿಕರ ಮತ್ತು ಮಹಿಳೆಯರ ನಾಯಕಿಯರಾದ ವಿಮಲಾರಣದೀವೆ, ಅಹಲ್ಯಾ ರಂಗಣೇಕರ್, ಪಾಪಾ ಉಮಾನಾಥನ್ ಮುಂತಾದವರನ್ನು ಸನ್ಮಾನಿಸಲಾಯಿತು. ತೆಲಂಗಾಣ ಹೋರಾಟದ ವೀರವನಿತೆ ಮಲ್ಲು ಸ್ವರಾಜ್ಯಂ, ತೇಭಾಗ ಚಳುವಳಿಯ ನಾಯಕಿ ಕನಕ ಮುಖರ್ಜಿಯವರೂ ಈ ಸನ್ಮಾನಿತರಲ್ಲಿ ಮುಖ್ಯರು. ಪರಿಸರ ಸಂರಕ್ಷಣೆ, ಸಾಲುಮರ ನೆಟ್ಟು ರಾಷ್ಟ್ರೀಯ ಪ್ರಶಸ್ತಿ ಪಡೆದ ಕರ್ನಾಟಕದ ಸಾಲುಮರದ ತಿಮ್ಮಕ್ಕನವರನ್ನೂ ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಭಾರತದ ಸ್ವಾತಂತ್ರ್ಯ ಹೋರಾಟದ ಧೀರ ಚರಿತ್ರೆಯಲ್ಲಿ ಅಳಿಸಲಾಗದಂತಹ ಹೆಸರುಗಳಾಗಿರುವ ಈ ಮಹಾನ್ ನಾಯಕಿಯರ ಅಪೂರ್ವ ಸಂಗಮ ಸಭಿಕರಲ್ಲಿ ಭಾವನಾತ್ಮಕವಾಗಿ ವಿದ್ಯುತ್ ಸಂಚಾರವಾಗುವಂತೆ ಮಾಡಿತು.

ಜೂನ್ 13ರಂದು ನಡೆದ ಈ ಸಂಘಟನೆಯ ಸದಸ್ಯರ ಮತ್ತು ಪ್ರತಿನಿಧಿಗಳ ಬೃಹತ್‌ರ್‍ಯಾಲಿ ಮಲ್ಲೇಶ್ವರದಲ್ಲಿ ಬಹಿರಂಗ ಅಧಿವೇಶನದೊಂದಿಗೆ ಮುಕ್ತಾಯವಾಯಿತು. ಕಾಂ. ಲೀಲಾವತಿ ವೇದಿಕೆಯಲ್ಲಿ ನಡೆದ ಬಹಿರಂಗ ಅಧಿವೇಶನವು ಜನವಾದಿ ಮಹಿಳಾ ಸಂಘಟನೆಯ ರಾಜ್ಯಾಧ್ಯಕ್ಷೆ ಶ್ರೀಮತಿ ಕೆ.ಎಸ್. ವಿಮಲಾರವರ ಅಧ್ಯಕ್ಷತೆಯಲ್ಲಿ ನಡೆಯಿತು. ಕ್ಯಾಪ್ಟನ್ ಲಕ್ಷ್ಮಿ, ಸಂಘಟನೆಯ ರಾಷ್ಟ್ರಾಧ್ಯಕ್ಷೆ ಬೃಂದಾಕಾರಟ್, ಡಾ॥ ವಿಜಯಾ, ಕೆ. ನೀಲಾ ಮುಂತಾದ ಗಣ್ಯರ ಭಾಷಣಗಳ ನಂತರ ಕರ್ನಾಟಕದಲ್ಲಿ ರೈತ, ಕಾರ್ಮಿಕ ಸಮುದಾಯದಲ್ಲಿ ಶ್ರಮವಹಿಸಿ ದುಡಿದ ಮಹಿಳೆಯರನ್ನು ಸನ್ಮಾನಿಸಲಾಯಿತು.

ಈ ಸಮಾವೇಶಕ್ಕೆ ಪೂರ್ವಭಾವಿಯಾಗಿ ನಗರದಲ್ಲಿ ಮಹಿಳಾಪರ ನಾಟಕ, ವಿಚಾರಸಂಕಿರಣ, ಚಿತ್ರಕಲಾಪ್ರದರ್ಶನಗಳನ್ನು ಜನವಾದಿ ಮಹಿಳಾಸಂಘಟನೆಯು ಏರ್ಪಡಿಸಿತ್ತು.

# ದುರ್ಬಲ ವರ್ಗದವರಿಗೆ ವಸತಿ

ದುರ್ಬಲ ವರ್ಗದವರಿಗೆ ವಿವಿಧ ಯೋಜನೆಗಳನ್ವಯ ಒಂದು ಲಕ್ಷ ಮನೆಗಳ ನಿರ್ಮಾಣ ಫಲಾನುಭವಿಗಳ ಆಯ್ಕೆಗೆ ವಿಶೇಷ ಸಮೀಕ್ಷೆ.

ಬಡವರಿಗೆ ಮನೆ ಒದಗಿಸುವುದು ರಾಜ್ಯ ಸರ್ಕಾರದ ಒಂದು ಪ್ರಮುಖ ಜವಾಬ್ದಾರಿ. ಆದರೆ ಕಳೆದೆರಡು ವರ್ಷಗಳಲ್ಲಿ ಕಾರ್ಯರೂಪಕ್ಕೆ ತರಲು ಸಾಧ್ಯವಾಗದಂತಹ ಗುರಿಗಳನ್ನು ನಿಗದಿಪಡಿಸಲಾಗಿತ್ತು. ಕಳೆದ 3 ವರ್ಷಗಳಲ್ಲಿ ಆಶ್ರಯ ಯೋಜನೆಯ ಅಡಿಯಲ್ಲಿ 77,856 ಮನೆಗಳನ್ನೂ, ಡಾ: ಅಂಬೇಡ್ಕರ್ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ 22,402 ಮನೆಗಳನ್ನೂ ಮತ್ತು ಇಂದಿರಾ ಅವಾಸ್ ಯೋಜನೆಯ ಅಡಿಯಲ್ಲಿ 23,148 ಮನೆಗಳನ್ನು ಕಟ್ಟಲಾಗಿದೆ. ವಾಸ್ತವಿಕವಾಗಿ ಕಾರ್ಯರೂಪಕ್ಕೆ ತರಬಹುದಾದಂತಹ ಗುರಿಯನ್ನು ಸರ್ಕಾರ ಹಾಕಿಕೊಳ್ಳುತ್ತದೆ. ಮುಂಬರುವ ವರ್ಷದಲ್ಲಿ, ಆಶ್ರಯ (60,000), ಅಂಬೇಡ್ಕರ್ ಗೃಹ ನಿರ್ಮಾಣ ಯೋಜನೆ (25,000) ಮತ್ತು ಇಂದಿರಾ ಅವಾಸ್ (15,000) ಯೋಜನೆಗಳ ಅಡಿಯಲ್ಲಿ ಒಟ್ಟು 1 ಲಕ್ಷ ಮನೆಗಳನ್ನು ಕಟ್ಟಲಾಗುವುದು. 1995-96 ಕೇಂದ್ರ ಬಜೆಟ್ಟಿನಲ್ಲಿ ಭಾರತ ಸರ್ಕಾರ ಪ್ರಕಟಿಸಿದಂತೆ ಹೆಚ್ಚಿನ ಹಣ ದೊರೆತಲ್ಲಿ ಇಂದಿರಾ ಅವಾಸ್ ಯೋಜನೆಯ ಅಡಿಯಲ್ಲಿ ಮನೆಗಳ ನಿರ್ಮಾಣದ ಗುರಿಯನ್ನು ಅಷ್ಟರಮಟ್ಟಿಗೆ ಹೆಚ್ಚಿಸಲಾಗುವುದು. ಮನೆ ಇಲ್ಲದವರಿಗೆ ನಿವೇಶನಗಳನ್ನು ಮತ್ತು ಮನೆಗಳನ್ನು ಒದಗಿಸುವಲ್ಲಿ ಖಾಸಗಿ ವಲಯಗಳೂ ಪಾಲ್ಗೊಳ್ಳುವಂತೆ ಅನುವು ಮಾಡಿಕೊಡಲು ಭೂಸುಧಾರಣಾ ಕಾಯ್ದೆಗೆ ಅವಶ್ಯಕ ತಿದ್ದುಪಡಿ.

## ಮನವಿ

ಕಳೆದ ಹನ್ನೆರಡು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಯಕ್ಕೆ ಬದ್ಧವಾಗಿರುವ ದ್ವೈಮಾಸಿಕ. ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನ್ನು ಬರೆದುಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. [illegible]ಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು, ಸಂಶೋಧನಾ ವರದಿಗಳನ್ನು, ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ'ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಾಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ **ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಿರಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ. ಮಹಿಳಾ ಪ್ರಗತಿಯಲ್ಲಿ ಕಳಕಳಿ ಹೊಂದಿರುವ ದಾನಿಗಳು ಉದಾರವಾಗಿ ದಾನನೀಡುವ ಮೂಲಕ ಈ ಪತ್ರಿಕೆ ಸದಾ ಉಳಿದು ಬರುವಂಥ 'ಸ್ಥಾಯಿನಿಧಿ' ಸ್ಥಾಪನೆಗೆ ನೆರವಾಗಬೇಕೆಂದು ಕೋರುತ್ತೇವೆ.**

**- ಸಂಪಾದಕ ಮಂಡಳಿ**

---

Reg. No. MAG (5) PRC, DEGL 036/89/87
BOOK POST/Periodicals

To,
Sri/Smt.
The Secretary
Women's Rights Assn
565, 8th Main, 12th Cross
JP Nagar II Phase
BANGALORE-560078

*If Undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082

# ಅಣ್ವಸ್ತ್ರ ತಯಾರಿಸಲು ನಿರಾಕರಿಸಿದ ವಿಜ್ಞಾನಿ – ಲೀ ಮೇಟ್ನರ್

-ನೇಮಿಚಂದ್ರ

ಅಣ್ವಸ್ತ್ರಗಳಷ್ಟೇ ಅಲ್ಲ, ಬರಿಯ ಅಸ್ತ್ರಗಳೂ ಇಲ್ಲದ, ಯುದ್ಧವಿಲ್ಲದ ಜಗತ್ತಿನ ಕನಸು, ಬದುಕನ್ನು ಪ್ರೀತಿಸುವ ಪ್ರತಿಯೊಬ್ಬ ಪ್ರಜೆಯದೂ ಆಗಿದೆ. ಆದರೆ ಆಕ್ರಮಣದ ಭೀತಿಯಿಂದಲೋ, ಶಕ್ತಿ ಪ್ರದರ್ಶನದ ಹಮ್ಮಿನಿಂದಲೋ, ಪ್ರತಿಯೊಂದು ದೇಶವೂ ತನ್ನ ಶಸ್ತ್ರಾಗಾರವನ್ನು ಭಯಂಕರ ಅಸ್ತ್ರಗಳಿಂದ ಭರ್ತಿ ಮಾಡುತ್ತಲೇ ಬಂದಿದೆ.

ಆಗಸ್ಟ 6, 1945. ಹಿರೋಷಿಮಾದ ಆಗಸದಲ್ಲಿ ಸಹಸ್ರ ಸೂರ್ಯರ ಕಣ್ಣು ಕುಕ್ಕುವ ಬೆಳಕು. ಜಗತ್ತಿನ ಮೊಟ್ಟ ಮೊದಲ ಪರಮಾಣು ಬಾಂಬ್ ಸ್ಫೋಟಿಸಿತ್ತು. ಒಂದು ಲಕ್ಷಕ್ಕೂ ಹೆಚ್ಚು ಜನರ ಜೀವ ಕಿತ್ತುಕೊಂಡು, ಹಿರೋಷಿಮಾ ನಗರವನ್ನು ಕ್ಷಣದಲ್ಲಿ ಸಂಪೂರ್ಣ ನಾಶ ಮಾಡಿತ್ತು. ವಿಜ್ಞಾನಿ ಲೀ ಮೇಟ್ನರ್, ತನ್ನ ಒಂದು ವೈಜ್ಞಾನಿಕ ಪ್ರಬಂಧ, ವಿಜ್ಞಾನಿಯಾಗಿ ತನ್ನ ಸೂಕ್ಷ್ಮ ದೃಷ್ಟಿ ಮತ್ತು ಗ್ರಹಣ ಶಕ್ತಿ ಇಂಥಾ ಭಯಂಕರ ಅಸ್ತ್ರಕ್ಕೆ ಕಾರಣವಾಗುವುದೆಂದು ಖಂಡಿತಾ ಊಹಿಸಿರಲಿಲ್ಲ.

ಯುರೇನಿಯಂ ವಿದಲನವನ್ನು ವಿವರಿಸಿದ ಈ ಪ್ರಸಿದ್ಧ ವಿಜ್ಞಾನಿ, ಅಮೆರಿಕೆಯ ಆಹ್ವಾನವನ್ನು ತಿರಸ್ಕರಿಸಿ, ಅಣ್ವಸ್ತ್ರವನ್ನು ತಯಾರಿಸಲು ನಿರಾಕರಿಸಿದ್ದಳು. ವೈಜ್ಞಾನಿಕ ಆಸಕ್ತಿಯ ತನ್ನ ಸಂಶೋಧನೆಯನ್ನು ಜೀವಹಾನಿಯ ಬಾಂಬ್ ತಯಾರಿಕೆಗೆ ಬಳಸ ಹೊರಟ ಈ ಅಣ್ವಸ್ತ್ರ ಯೋಜನೆ ಯಶಸ್ವಿಯಾಗದಿರಲಿ ಎಂದು ಹಾರೈಸಿದಾಕೆ.

1878ರಲ್ಲಿ ಆಸ್ಟ್ರಿಯಾದ ಯಹೂದಿ ಕುಟುಂಬದಲ್ಲಿ ಹುಟ್ಟಿದ ಲೀ ಮೇಟ್ನರ್ ಮೇಧಾವಿ ಭೌತಶಾಸ್ತ್ರಜ್ಞೆ. ತಂದೆ ಶ್ರೀಮಂತ ಲಾಯರ್. ಎಂಟು ಮಕ್ಕಳಲೊಬ್ಬಳಾಗಿ ಜನಿಸಿದ ಲೀ ಮೇಟ್ನರ್ ಬಾಲ್ಯದಿಂದಲೇ ಭೌತಶಾಸ್ತ್ರದಲ್ಲಿ ಅಪಾರ ಆಸಕ್ತಿ ಬೆಳೆಸಿಕೊಂಡಳು. ಆಕೆಯ ತಾಯಿ ತಂದೆ, ಹೈಸ್ಕೂಲ್ ಮುಗಿದೊಡನೆ ಆ ಕಾಲದ ಬಹಳಷ್ಟು ಮಹಿಳೆಯರಂತೆ ಆಕೆಯ ವಿದ್ಯಾಭ್ಯಾಸವೂ ನಿಲ್ಲುವುದೆಂದು ನಿರೀಕ್ಷಿಸಿದ್ದರು. ಆದರೆ ಲೀ ಮೇಟ್ನರ್ ಮೇರಿ ಕ್ಯೂರಿಯ ಬಗ್ಗೆ ಓದಿದ್ದಳು. ಮೇರಿ ಕ್ಯೂರಿ ಆಕೆಯ ಆದರ್ಶವಾದಳು. ಮೇರಿ ಕ್ಯೂರಿಯಂತೆಯೇ ವಿಜ್ಞಾನಿಯಾಗಿ ವಿಕಿರಣಶೀಲತೆಯ ರಂಗದಲ್ಲಿ ಶೋಧನೆಗಿಳಿಯುವ ಅದಮ್ಯ ಆಸೆ. ಲೀ ಮೇಟ್ನರಗೆ 22 ವರ್ಷ, ಆ ಕಾಲಕ್ಕೆ ಹೆಣ್ಣು ಮಕ್ಕಳು ಆ ವಯಸ್ಸಿಗೂ ಬಹಳ ಮೊದಲೇ ವಿವಾಹವಾಗುತ್ತಿದ್ದ ಕಾಲ. ಆದರೆ ಲೀ ಮೇಟ್ನರ್ ವಿಯನ್ನಾ ವಿಶ್ವವಿದ್ಯಾಲಯವನ್ನು ಸೇರಬಯಸಿದ್ದಳು. ತಂದೆ ತಾಯಿಯರು ಮೊದಲು ವಿರೋಧಿಸಿದರು. ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಮಹಿಳೆಯರಿಗೆ ಪ್ರವೇಶ ಸಿಗುವುದು ಕಷ್ಟವಿತ್ತು. ಜೊತೆಗೆ ವಿಜ್ಞಾನದಿಂದ ಜೀವನೋಪಾಯ ಕಂಡುಕೊಂಡ ಮಹಿಳೆಯರು ಬೆರಳೆಣಿಕೆಯಷ್ಟಿರಲಿಲ್ಲ. ಆದರೆ ಲೀಯ ಹಟದೆದುರು ಅವರು ಬಾಗಲೇ ಬೇಕಾಯಿತು. 1901ರಲ್ಲಿ ವಿಶ್ವವಿದ್ಯಾಲಯವನ್ನು ಪ್ರವೇಶಿಸಿದ ಲೀ, 1905ರಲ್ಲಿ ಡಾಕ್ಟರೇಟ್ ಡಿಗ್ರಿ ಪಡೆದಳು. 1365ರಲ್ಲಿ ಸ್ಥಾಪಿತವಾದ ವಿಯನ್ನಾ ವಿಶ್ವವಿದ್ಯಾಲಯದಲ್ಲಿ ಅಲ್ಲಿಯವರೆಗೂ ಕೇವಲ 14 ಮಹಿಳೆಯರು ಮಾತ್ರ ಡಾಕ್ಟರೇಟ್ ಪದವಿ ಪಡೆದಿದ್ದರು. ಲೀ ಈ ವಿಶ್ವವಿದ್ಯಾಲಯದಿಂದ ಭೌತಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದ ಪ್ರಥಮ ಮಹಿಳೆ. ಹೆಚ್ಚಿನ ಅಧ್ಯಯನಕ್ಕೆ ಲೀ, ಬರ್ಲಿನ್ ವಿಶ್ವವಿದ್ಯಾಲಯಕ್ಕೆ ಹೋದಳು. ಅದಾಗಲೇ ವಿಕಿರಣಶೀಲ ರಂಗದಲ್ಲಿ ದುಡಿಯುತ್ತಿದ್ದ ರಸಾಯನಶಾಸ್ತ್ರಜ್ಞ ಓಟೋ ಹಾನ್ ಆಕೆಯನ್ನು ತನ್ನ ಸಹಾಯಕಿಯಾಗಿ ತೆಗೆದುಕೊಳ್ಳಲು ಒಪ್ಪಿದ. ಆದರೆ ರಸಾಯನ ಶಾಸ್ತ್ರ ವಿಭಾಗದ ಮುಖ್ಯಸ್ಥನಾದ ಎಮಿಲ್ ಫಿಷರ್, ಸಂಸ್ಥೆಯ ಪ್ರವಚನದ ಕೊಠಡಿಗಳಿಗಾಗಲೀ, ಪ್ರಯೋಗಶಾಲೆಗಳಿಗಾಗಲೀ ಮಹಿಳೆಯರಿಗೆ ಪ್ರವೇಶ ನೀಡಲು ಸಂಪೂರ್ಣ ನಿರಾಕರಿಸಿದ. ಓಟೋ ಹಾನ್ ಮತ್ತು ಲೀ ಮೇಟ್ನರ್ ಬೇಸಮೆಂಟ್‌ನಲ್ಲಿದ್ದ ಒಂದು ಬಡಗಿಯ ಕಾರ್ಯಾಗಾರವನ್ನೇ ಪ್ರಯೋಗಶಾಲೆಯಾಗಿ ಪರಿವರ್ತಿಸಿ ದುಡಿಯ ತೊಡಗಿದರು. ಇಂಥಾ ಇಕ್ಕಟ್ಟಿನ ಅನಾನುಕೂಲದ ಕೋಣೆಯಲ್ಲೂ ಅವರ ಜೊತೆಯ ಸಂಶೋಧನೆ ಸಂತಸದ ಕ್ಷಣಗಳಿಂದ ತುಂಬಿದ್ದವು. 1912ರಲ್ಲಿ ಇಬ್ಬರೂ ಬರ್ಲಿನ್‌ನ ಸಬರ್ಬ್‌ನಲ್ಲಿದ್ದ ಕೈಸರ್ ವಿಲ್ಹೆಮ್ ಸಂಸ್ಥೆಯನ್ನು ಸೇರಿದರು. ಮೊದಲ ಮಹಾಯುದ್ಧ ಆರಂಭವಾದಾಗ, ಓಟೋಹಾನ್, ಯುದ್ಧ ಸಂಬಂಧದ ಸಂಶೋಧನೆಯನ್ನು ನಡೆಸುತ್ತಾ ಪ್ರಯೋಗಶಾಲೆಯಲ್ಲಿಯೇ ಉಳಿದ, ಆದರೆ ಮೇಟ್ನರ್ ಫೀಲ್ಡ್ ಆಸ್ಪತ್ರೆಯಲ್ಲಿ ಕ್ಷ-ಕಿರಣ ತಂತ್ರಜ್ಞಳಾಗಿಯೂ, ದಾದಿಯಾಗಿಯೂ ದುಡಿದಳು.

ಯುದ್ಧ ಮುಗಿದಿತ್ತು, ಅವರ ಸಂಶೋಧನೆ ಮುಂದುವರೆದು, ಅವರು ಹೊಸದೊಂದು ಮೂಲಧಾತುವಿನ ಇರವನ್ನು ಪ್ರಕಟಿಸಿದರು. ಯುರೇನಿಯಂನಂತೆಯೇ ಈ ಮೂಲಧಾತು ವಿಕಿರಣಶೀಲ ಗುಣವನ್ನು ಹೊಂದಿತ್ತು. ಈ ಮೂಲಧಾತು ಮೆಲ್ಲನೆ ಕುಸಿಯುತ್ತಾ ಸ್ವಯಂನಶಿಸಿ, ಆಕ್ಟಿನಿಯಂ ಎಂಬ ಕೊಂಚ ಹಗುರದ ಮೂಲಧಾತುವಾಗಿ ಪರಿವರ್ತನೆಗೊಳ್ಳುತ್ತಿತ್ತು. ಮೇಟ್ನರ್ ಮತ್ತು ಓಟೋ ಅದನ್ನು 'ಪ್ರೋಟೋ-ಆಕ್ಟಿನಿಯಮ್,' ಅಂದರೆ ಲ್ಯಾಟಿನ್ ಭಾಷೆಯಲ್ಲಿ 'ಆಕ್ಟಿನಿಯಂಗೆ ಮೊದಲು' ಎಂಬ ಅರ್ಥದ ಹೆಸರು ಇಟ್ಟರು. ತಟ್ಟನೆ ಮೇಟ್ನರ್ ಮತ್ತು ಓಟೋ ಹೆಸರು ಎಲ್ಲಿಲ್ಲದ ಪ್ರಸಿದ್ಧಿಯನ್ನು ಕಂಡಿತು. ಬರ್ಲಿನ್ ವಿಜ್ಞಾನ ಅಕ್ಕಾಡೆಮಿ ಮೇಟ್ನರ್‌ಗೆ ಲೆಬ್ನಿಜ್ ಪದಕವನ್ನಿತ್ತು ಗೌರವಿಸಿತು. ಆಸ್ಟ್ರಿಯಾದ ವಿಜ್ಞಾನ ಅಕಾಡೆಮಿ ಮೇಟ್ನರ್‌ಗೆ ಲೀಬೆನ್ ಪ್ರಶಸ್ತಿ ನೀಡಿತು. 1926ರಲ್ಲಿ ಬರ್ಲಿನ್

ವಿಶ್ವವಿದ್ಯಾಲಯದಲ್ಲಿದ್ದ ಲೀ ಮೇಟ್ನರ್ ಜರ್ಮನಿಯ ಮೊಟ್ಟ ಮೊದಲ ಭೌತಶಾಸ್ತ್ರದ ಪ್ರೊಫೆಸರ್ ಆದಳು. ಈ ಸಮಯಕ್ಕಾಗಲೇ ಆಕೆ ಕೈಸರ್ ವಿಲ್ಹೆಮ್ ಸಂಸ್ಥೆಯಲ್ಲಿ ಹೊಸದಾಗಿ ಆರಂಭವಾದ ವಿಕಿರಣಶೀಲ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥಳಾಗಿದ್ದಳು. ಇಲ್ಲ ಈಕೆ ವಿಕಿರಣಶೀಲ ಮೂಲಧಾತುಗಳು ಕುಸಿದು ಸ್ವಯಂಶಿಸಿ ಹೊರಚಿಮ್ಮುವ ವಿಕಿರಣಶೀಲ ಕಿರಣಗಳನ್ನು, ಅವು ಬಿಡುಗಡೆ ಮಾಡುವ ಶಕ್ತಿಯನ್ನು ಕುರಿತು ಸಂಶೋಧನೆ ನಡೆಸಿದಳು.

1920 ದಶಕದಲ್ಲಿ ಜರ್ಮನಿ ನಾಜಿಗಳ ಹಿಡಿತಕ್ಕೆ ಬಂದಿತು. ಯಹೂದಿ ಕುಟುಂಬದಿಂದ ಬಂದ ಮೇಟ್ನರ್, ಆಸ್ಟ್ರಿಯನ್ ಪ್ರಜೆಯಾದರೂ, ಪರಿಸ್ಥಿತಿ ಸಂಪೂರ್ಣ ಸುರಕ್ಷಿತವಿರಲಿಲ್ಲ. ಸುತ್ತಲಿನ ಪ್ರಕ್ಷುಬ್ಧ ರಾಜಕೀಯ ಸ್ಥಿತಿಯಲ್ಲೂ, ಲೀ ಮೇಟ್ನರ್ ತನ್ನ ಸಂಶೋಧನೆ ಮುಂದುವರೆಸಿದಳು. ಒಂದು ಕಾಲಕ್ಕೆ ಪರಮಾಣುವನ್ನು ವಿಭಜಿಸಲಾರದ ಅತಿ ಸಣ್ಣ ಕಣವೆಂದು ಭಾವಿಸಲಾಗಿತ್ತು. ಆದರೆ ಇದೀಗ ಪರಮಾಣುವಿನೊಳಗಿನ ಪ್ರೋಟಾನ್, ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್‌ನ ಇರವು ತಿಳಿದು ಬಂದಿತ್ತು. ಕ್ಯಾಡವಿಕ್ ಎಂಬ ವಿಜ್ಞಾನಿ ಸ್ವತಂತ್ರ ನ್ಯೂಟ್ರಾನ್‌ಗಳನ್ನು ಬಿಡುಗಡೆ ಮಾಡುವ 'ನ್ಯೂಟ್ರಾನ್ ಗನ್' ಸಾಧನವನ್ನು ಕಂಡು ಹಿಡಿದಿದ್ದ. ಇಟಲಿಯ ವಿಜ್ಞಾನಿ ಎನ್ರಿಕೋ ಫರ್ಮಿ ಪರಮೊಣುವನ್ನು ತಾಡಿಸಲು ನ್ಯೂಟ್ರಾನುಗಳನ್ನು ಬಳಸಿದ. ಪರಮಾಣುವಿನ 'ನ್ಯೂಕ್ಲಿಯಸ್' ನ್ಯೂಟ್ರಾನ್ ಒಂದನ್ನು ಹಿಡಿದು-ಕೊಂಡಾಗ, ನ್ಯೂಕ್ಲಿಯಸ್ ಬೀಟಾ ಕಿರಣಗಳನ್ನು ಹೊರಚಿಮ್ಮುತ್ತದೆ. ಈ ಕಾರಣಕ್ಕೆ ಪರಮಾಣು ಪರಿವರ್ತನೆಗೊಳ್ಳುತ್ತದೆ. ಇದೀಗ ಮೇಟ್ನರ್ ಮತ್ತು ಓಟೋ ಹಾನ್ ಕೂಡ ಭಾರದ ಮೂಲಧಾತು-ಗಳನ್ನು ನ್ಯೂಟ್ರಾನ್‌ನಿಂದ ತಾಡಿಸುವ ಪ್ರಯೋಗಗಳನ್ನು ನಡೆಸಿದರು.

ಲೀ ಮೇಟ್ನರ್ ತಾನು ಆಸ್ಟ್ರಿಯಾದಲ್ಲಿ ಸುರಕ್ಷಿತ ಎಂದು ಭಾವಿಸಿದ್ದಳು. ಆದರೆ 1938 ನಾಜಿಗಳು ಆಸ್ಟ್ರಿಯಾವನ್ನು ವಶಪಡಿಸಿಕೊಂಡರು. ಥಟ್ಟನೆ ಯಹೂದಿ ಮೂಲದ ಮೇಟ್ನರ್ ಜೀವ ಅಪಾಯದಲ್ಲಿತ್ತು. ಸಣ್ಣ ಒಂದೇ ಒಂದು ಸೂಟ್‌ಕೇಸ್ ಹಿಡಿದು, ವೀಸಾ ಇಲ್ಲದೆಯೆ ನೆದರಲ್ಯಾಂಡ್ಸ್‌ನ ರೈಲು ಹತ್ತಿದಳು. ನಂತರ ಸ್ವೀಡನ್‌ನ ಸೈದ್ಧಾಂತಿಕ ಭೌತಶಾಸ್ತ್ರದ ನೋಬೆಲ್ ಸಂಸ್ಥೆಯನ್ನು ಸೇರಿದಳು. ಇಲ್ಲಿ ಸ್ವೀಡನ್‌ನಲ್ಲಿ, ಸಂಶೋಧನೆಗೆ ಮುಂದುವರೆದರೂ, ತನ್ನ ದೇಶ, ನಾಡು, ತನ್ನವರೆಲ್ಲರನ್ನೂ ಬಿಟ್ಟು ಬಂದ ಈ ವಿಜ್ಞಾನಿಗೆ ಒಂಟಿತನ ಕಾಡಿತ್ತು. ಸ್ವೀಡನ್‌ನಲ್ಲಿದ್ದ ಈ ಸಮಯದಲ್ಲಿಯೇ ಆಕೆಗೆ ಓಟೋ ಹಾನ್‌ನಿಂದ ಒಂದು ಪತ್ರ ಬಂದಿತು. ಅದರಲ್ಲಿ ಆತ ಯುರೇನಿಯಂನನ್ನು ನ್ಯೂಟ್ರಾನ್‌ಗಳಿಂದ ಫರ್ಮಿಯಂತೆಯೇ ತಾಡಿಸಿದಾಗ, ಯುರೇನಿಯಂನ ಪರಮಾಣು ತೂಕಕ್ಕೆ ಹತ್ತಿರದ ಪ್ರತ್ಯುತ್ಪನ್ನವು ದೊರೆಯುವ ಬದಲು, ಥಟ್ಟನೆ ವಿಕಿರಣಶೀಲ ಬೇರಿಯಂ ಉತ್ಪನ್ನವಾಗಿದೆ ಎಂದು ಅಚ್ಚರಿಯಿಂದ ಬರೆದ. ಬೇರಿಯಂ, ಯುರೇನಿಯಂಗಿಂತ ಬಹಳ ಹಗುರವಿತ್ತು.

ಬೇರಿಯಂನಲ್ಲಿ ಯುರೇನಿಯಂಗಿಂತ 36 ಪ್ರೋಟಾನುಗಳು ಕಡಮೆ ಇವೆ. ಅಂದರೆ ಬೇರಿಯಂ ಉತ್ಪನ್ನವಾಗಲು, ನ್ಯೂಟ್ರಾನುಗಳು ಯುರೇನಿಯಂ ನ್ಯೂಕ್ಲಿಯಸ್ಸನ್ನು ಹೆಚ್ಚು ಕಡಿಮೆ ಇಬ್ಭಾಗವಾಗಿ ಒಡೆದಿರಬೇಕು. ಇಲ್ಲಿಯವರೆಗೂ ಯಾವ ಸಿದ್ಧಾಂತವೂ ನ್ಯೂಟ್ರಾನೊಂದು, ನ್ಯೂಕ್ಲಿಯಸ್ ವಿಭಜಿಸುವುದನ್ನು ಊಹಿಸಿರಲಿಲ್ಲ. ಹಾನ್ ಈ ವಿಚಿತ್ರ ಘಟನೆಯನ್ನು ವಿವರಿಸಲು ಸಾಧ್ಯವೆ ಎಂದು ಮೇಟ್ನರ್‌ಳನ್ನು ಕೇಳಿದ್ದನು. ಮೇಟ್ನರ್ ವಿಜ್ಞಾನಿ ನೀಲ್ಸ್ ಬೋರ್‌ನ ಇತ್ತೀಚಿನ ಸಂಶೋಧನೆಗಳನ್ನು ಅಧ್ಯಯನ ನಡೆಸಿದಳು. ಬೋರ್, ಪರಮಾಣು ನ್ಯೂಕ್ಲಿಯಸ್‌ನಲ್ಲಿರುವ ಕಣಗಳನ್ನು ಯಾವುದೋ ಒಂದು ಶಕ್ತಿ ಹಿಡಿದಿಟ್ಟಿದೆ ಎಂದು ನಂಬಿದ್ದ. ಓಟೋ ಹಾನ್‌ನ ಪ್ರಯೋಗಗಳ ಫಲಿತಾಂಶಗಳನ್ನು ವಿಶ್ಲೇಷಿಸಿ, ಲೀ ಮೇಟ್ನರ್ ಯುರೇನಿಯಂ ವಿದಲನದ ಪ್ರಕ್ರಿಯೆಗೆ ಸರಿಯಾದ ವಿವರಣೆಯನ್ನು ನೀಡಿದಳು. ಒಂದು ನ್ಯೂಟ್ರಾನನ್ನು, ಯುರೇನಿಯಂ ಪರಮಾಣುವಿಗೆ ಕೂಡಿಸಿದಾಗ ಅದು ಯುರೇನಿಯಂ ಪರಮಾಣುವನ್ನು ಎರಡು ಹಗುರ ಮೂಲಧಾತುಗಳಾಗಿ ಒಡೆದಿತ್ತು. ಹೀಗೆ ವಿದಲನಗೊಂಡು ಹೊರಬಿದ್ದ ಎರಡು ಮೂಲಧಾತುಗಳ ಭೌತವಸ್ತು, ಮೂಲ ಭೌತವಸ್ತುವಿಗಿಂತಲೂ ಕೊಂಚ ಕಡಮೆ ಇದ್ದು, ಈ ವ್ಯತ್ಯಾಸವೇ ಶಕ್ತಿಯಾಗಿ ಹೊರಬಿದ್ದಿತ್ತು. ಮೇಟ್ನರ್ ಐನ್‌ಸ್ಟೈನ್ ಅವರ $E=mc^2$ ಸಮೀಕರಣವನ್ನು ಬಳಸಿ, ಈ ಬಗೆಯಲ್ಲಿ ವಿದಲನಗೊಂಡ ಪರಮಾಣು 200 ಮಿಲಿಯ ಎಲೆಕ್ಟ್ರಾನ್ ವೋಲ್ಟಿನಷ್ಟು ಅಗಾಧ ಶಕ್ತಿಯನ್ನು ಬಿಡುಗಡೆ ಮಾಡುತ್ತದೆ ಎಂದು ಗುಣಿಸಿ ತಿಳಿಸಿದಳು. ಓಟೋನ ಪ್ರಯೋಗಗಳನ್ನು ಪುನರಾವರ್ತಿಸಿದಾಗ, ಮೇಟ್ನರ್ ಗುಣಿಸಿದಷ್ಟೇ ಅಳತೆಯ ಶಕ್ತಿ ಬಿಡುಗಡೆಯಾಗಿತ್ತು. ಲೀ ಮೇಟ್ನರ್ ಇದೀಗ 'ಪರಮಾಣು ವಿದಲನ' ಎಂದು ಕರೆದ ಈ ಪ್ರಕ್ರಿಯೆಯನ್ನು ಕುರಿತು ಪ್ರಬಂಧ ತಯಾರಿಸಿದರು. ತಟ್ಟನೆ ಪ್ರಪಂಚದ ಎಲ್ಲೆಡೆಯಲ್ಲಿಯೂ ವಿಜ್ಞಾನಿಗಳು ಪರಮಾಣು ವಿದಲನವನ್ನು ಕುರಿತು ಮಾತನಾಡತೊಡಗಿದರು. ಇದೀಗ ಅಮೆರಿಕೆಯಲ್ಲಿ ನೆಲಸಿದ್ದ ಎನ್ರಿಕೋ ಫರ್ಮಿ, ನ್ಯೂಟ್ರಾನ್, ಯುರೇನಿಯಂ ಪರಮಾಣುವನ್ನು ಒಡೆದಾಗ, ಮತ್ತಷ್ಟು ನ್ಯೂಟ್ರಾನುಗಳು ಬಿಡುಗಡೆ ಹೊಂದುತ್ತವೆ ಎಂದು ಅರಿತ. ಈ ನ್ಯೂಟ್ರಾನುಗಳು ಮತ್ತಷ್ಟು ಯುರೇನಿಯಂ ನ್ಯೂಕ್ಲಿಯಸ್‌ಗಳಿಗೆ ಬಡಿದು ಅವು ಇನ್ನಷ್ಟು ನ್ಯೂಟ್ರಾನುಗಳನ್ನು ಬಿಡುಗಡೆ ಮಾಡಿ, ಇದೊಂದು ಬಗೆಯ ಸರಪಳಿ ಕ್ರಿಯೆಗೆ ಕಾರಣವಾಗಿ ಮುಂದುವರೆಯುತ್ತದೆ. ಅಂದರೆ ಸಾಕಷ್ಟು ಯುರೇನಿಯಂ ಧಾತು ಇತ್ತೆಂದರೆ ಈ ಬಗೆಯ ಸರಪಳಿ ಕ್ರಿಯೆ ಆರಂಭವಾಗಬಲ್ಲದು. ವಿಶಿಷ್ಟ ಅವಸ್ಥೆಯಲ್ಲಿ ಅತಿ ವೇಗದ ಸರಪಳಿ ಕ್ರಿಯೆ, ವಿಪರೀತದ ಶಕ್ತಿ ಹೊರಹಾಕುತ್ತದೆ. ಥಟ್ಟನೆ ಅಗಾಧ ಶಕ್ತಿ ಚಿಮ್ಮುವ ಅಸ್ತ್ರದ ಸಾಧ್ಯತೆ ಕಂಡುಬಂದಿತು.

*12ನೇ ಪುಟಕ್ಕೆ.....*

# ಪೌನಾರ್ ಆಶ್ರಮದಲ್ಲಿ ಕನ್ನಡದ ಅಕ್ಕ :

-ಗೀತಾ ಡಿ.ಸಿ.



ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕದ ಪ್ರಾಂತ್ಯದಲ್ಲಿ ಮುಖ್ಯಪಾತ್ರವಹಿಸಿದ ಹಳ್ಳಿಕೇರಿ ಗುದ್ಲ್ಯಪ್ಪನವರ ಮೊಮ್ಮಗಳೇ ಈ ಹಳ್ಳಿಕೇರಿ ಚೆನ್ನಮ್ಮ. ದೇಶಸೇವೆ, ದೇಶಭಕ್ತಿ ವಂಶಪಾರಂಪರ್ಯವಾಗಿ ಬಂದ ಗುಣ. ತಂದೆ ಚೆನ್ನಬಸಪ್ಪ, ತಾಯಿ ಗೌರಮ್ಮ. ಗಾಂಧೀಜಿ ಮತ್ತು ವಿನೋಬಾಜಿಯವರ ವಿಚಾರಧಾರೆಯಿಂದ ಸ್ಫೂರ್ತಿಗೊಂಡು ಸರ್ವೋದಯದ ರಚನಾತ್ಮಕ ಕಾರ್ಯಗಳಿಗೆ ಅರ್ಪಿಸಿಕೊಂಡ ಕುಟುಂಬದಲ್ಲಿ ಜನನ. ಧಾರವಾಡ ಜಿಲ್ಲೆ, ಹೊಸರಿತ್ತಿಯಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಇಡೀ ಕುಟುಂಬವೇ ಜೈಲು ಸೇರುವಾಗ್ಗ ಪುಟಾಣಿ ಚೆನ್ನಮ್ಮನಿಗೆ ಬರೀ ಎರಡು ವರ್ಷ. ಅಲ್ಲಿಂದ ಬಿಡುಗಡೆಗೊಂಡು ಹೊರಬರುವುದರೊಳಗೆ ಮನೆಯೆಲ್ಲಾ ಬರಿದಾಗಿತ್ತು. ಅಂಗಡಿಯಿಟ್ಟು ನಡೆಸುತ್ತಿದ್ದ ವ್ಯಾಪಾರವೆಲ್ಲ ಅಸ್ತವ್ಯಸ್ತಗೊಂಡಿತ್ತು. ಕೂಲಿ ಮಾಡಿ ಜೀವನ ಸಾಗಿಸಬೇಕಾಯ್ತು. ಮುಂದಿನ ಬದುಕೆಲ್ಲ ಬರೀ ಬಡತನದ್ದೇ. ಇದೇ ಬಡತನದಲ್ಲಿ ಚೆನ್ನಮ್ಮನವರ ಬಾಲ್ಯವೂ ಕಳೆಯಿತು.

ಆ ಹೊತ್ತಿಗಾಗಲೇ ಹೊಸರಿತ್ತಿಯಲ್ಲಿ ರಾಷ್ಟ್ರೀಯ ಆಂದೋಲನದ ಕೇಂದ್ರವಾಗಿ ಗಾಂಧೀ ಆಶ್ರಮವೊಂದಿತ್ತು. ಇದರ ಪ್ರಭಾವದಿಂದಾಗಿ ಗುದ್ಲ್ಯಪ್ಪನವರ ಮನೆಯೇ ಒಂದು ಆಶ್ರಮದಂತಿತ್ತು. ಅಲ್ಲಿ ನೂಲೋದು, ಕುಟ್ಟೋದು, ಬೀಸೋದು, ಹೊಲದ ಕೆಲಸ, ಪ್ರಾರ್ಥನೆ, ಗಾಂಧೀ ಹೇಳಿದಂತೆ ಮಿಲ್ಲಿನ ಬಟ್ಟೆ ಸುಟ್ಟು ಖಾದಿ ಬಳಕೆ.... ಇತ್ಯಾದಿ ನಡೀತಾನೇ ಇತ್ತು. 'ಆಗ ಖಾದಿ ಧರಿಸಲು ಆರಂಭಿಸಿದ ನಾನು ಈಗಲೂ ಖಾದಿ ಬಿಟ್ಟು ಬೇರೆ ತೊಟ್ಟಿಲ್ಲ' ಎಂದು ಹೆಮ್ಮೆಯಿಂದ ಹೇಳುತ್ತಾರೆ ಚೆನ್ನಕ್ಕ. (ಹೀಗೆ 'ಅಕ್ಕ' ಎಂದು ಹೆಸರಿಟ್ಟದ್ದು ವಿನೋಬಾಜಿ. ಈಗ ಎಲ್ಲರಿಗೂ 'ಅಕ್ಕ'.)

ಚೆನ್ನಕ್ಕನವರಿಗೆ ಶಾಲೆಯ ಶಿಕ್ಷಣವಂತೂ ಶೂನ್ಯ. ಆದರೆ ಬದುಕಿನಿಂದ ಕಲಿತದ್ದು ಅಪಾರ. ಓದಲು ತುಂಬಾ ಆಸೆ ಹೊತ್ತಿದ್ದ ಅವರಿಗೆ ಅವಕಾಶವಾಗಲೇ ಇಲ್ಲ. ಆಗ ಸುತ್ತಲೂ ಒಳ್ಳೆಯ ವಾತಾವರಣವಿದ್ದುದರಿಂದ ಎಲ್ಲೇ ರಾಷ್ಟ್ರೀಯ ಕಾರ್ಯಕ್ರಮವಿರಲಿ ಅಲ್ಲಿ ಹಾಡೋದು, ಏನೂ ಗೊತ್ತಿಲ್ಲದಿದ್ದರೂ ಅಲ್ಲಿ ಹೋಗಿ ಕೂತು ಎಲ್ಲವನ್ನೂ ಆಲಿಸೋದು ಬರೀ ಇದೇ ಆಯ್ತು ಕಲಿಯೋ ವಯಸ್ಸಲ್ಲಿ' ಎಂದು ನಿಟ್ಟುಸಿರಿಡುತ್ತಾರೆ, ಈಗಲೂ. 10ನೇ ವಯಸ್ಸಿನ ವೇಳೆಗೆ ಅವರ ಚಿಕ್ಕಮ್ಮ ದೇವಕ್ಕ ರಮಾನಂದ ಮನ್ನಂಗಿಯವರು ಹೊಸರಿತ್ತಿಯಲ್ಲಿ ಕಸ್ತೂರಿಬಾ ಕೇಂದ್ರವೊಂದನ್ನು ಆರಂಭಿಸಿದರು. ಅಲ್ಲಿ 3 ವರ್ಷ ಕೆಲಸ ಮಾಡಿದ ಫಲವಾಗಿ ಅಕ್ಷರ ಜ್ಞಾನವೊದಗಿತು: 'ಅದೂ ಎಂಥಾ ಕೆಲಸ? ಆ ಕೇಂದ್ರಕ್ಕೆ ಕಲಿಯುವ ಸಣ್ಣ ಮಕ್ಕಳನ್ನ ಕರ್ಕೊಂಡು ಬರೋದು, ಮತ್ತೆ ಅವರ ಮನೆಗಳಿಗೊಯ್ಯೋದು. ಆ ಮಕ್ಕಳಿಗೆ ಹೇಳಿಕೊಡುವಾಗ ನಾನೂ ಅಕ್ಷರ ಕಲಿತೆ. ಕನ್ನಡ ಮಾತ್ರ.' ಇದಿಷ್ಟೇ ಅವರ ಪಾಲಿನ ವಿದ್ಯಾಭ್ಯಾಸ!

14ನೇ ವಯಸ್ಸಿಗೇ ಬ್ರಹ್ಮಚರ್ಯದ ಸಂಕಲ್ಪತೊಟ್ಟು, ಸಮಾಜಸೇವೆಗೆ ತಮ್ಮನ್ನು ಅರ್ಪಿಸಿಕೊಳ್ಳಲು ನಿಶ್ಚಯಿಸಿ ಮನೆಬಿಟ್ಟು ಹೊರಟರು. ಇದಕ್ಕೆಲ್ಲ ತಂದೆ-ತಾಯಿಯರ ಆಶೀರ್ವಾದ ಬೆಂಬಲ ಇದ್ದೇ ಇತ್ತು. ನಂತರ ಒಂದು ವರ್ಷ ಅಮರಗೋಳ ಕಸ್ತೂರಿಬಾ ಕೇಂದ್ರದಲ್ಲಿ ಮತ್ತು ಗದುಗಿನಲ್ಲಿ 6 ತಿಂಗಳು ಹಳ್ಳಿಯ ಸೇವಾಜ್ಞಾನ-ನರ್ಸಿಂಗ್ ಟ್ರೈನಿಂಗ್ ಕೋರ್ಸ್ (ಯಾವುದೇ ಸೇವಾ ಟ್ರೈನಿಂಗ್ ಸೆಂಟರ್‌ಗೆ ಹೋದಾಗಲೂ 3 ವರ್ಷ ಕೆಲಸ ಮಾಡುತ್ತೇವೆಂದು ಬರೆದುಕೊಡೋ ಪದ್ಧತಿ. ಆಗ ಖರ್ಚೆಲ್ಲ ಅವರದ್ದೇ) ಅಲ್ಲಿಂದನೇ ಸೇವಾ ಕೆಲಸ ಆರಂಭ. ಕಸ್ತೂರಿಬಾ ಕೇಂದ್ರದಿಂದ ಮೊದಲು ಬೆಳಗಾಂ ಜಿಲ್ಲೆಯಲ್ಲಿ 6 ವರ್ಷ ಗ್ರಾಮಸೇವಕಿಯಾಗಿ ಕೆಲಸ. ಅದೇ ವೇಳೆಗೆ ವಿನೋಬಾ ಅವರ 'ಭೂದಾನ ಚಳುವಳಿ' ಕರ್ನಾಟಕಕ್ಕೆ ಬಂದಿದ್ದು- 1957ರಲ್ಲಿ. ಅದರಲ್ಲಿ ಭಾಗವಹಿಸುವ ಇಚ್ಛೆಯಾಗಿ ಕೆಲಸಕ್ಕೆ ರಾಜೀನಾಮೆ ನೀಡಿ ಭೂದಾನ ಆಂದೋಲನದಲ್ಲಿ ಧುಮುಕಿದ್ದಾಯ್ತು. ವಿನೋಬಾರ ಮೊದಲ ಭೇಟಿ ಅರಸೀಕೆರೆಯಲ್ಲಿ. ನಂತರ ಹೊಸರಿತ್ತಿಗೇ ಬಂದಾಗ ಎರಡನೇ ಭೇಟಿ. ಅಲ್ಲಿ ಕಂಡಾಗ ವಿನೋಬಾಜಿ 'ಓಹ್ ಕಿತ್ತೂರ್ ಚೆನ್ನಮ್ಮಾ' ಅಂತ ಕೂಗಿ ಹೇಳಿದ್ದನ್ನ ಚೆನ್ನಕ್ಕ ಮರೆಯೋದೇ ಇಲ್ಲ. 1957ರ ಕೊನೆಗೆ ಕರ್ನಾಟಕ ಬಿಟ್ಟು ಹೊರಡೋ ವೇಳೆಗೆ ತಮ್ಮ ಬದುಕನ್ನು ಚಳುವಳಿಗಾಗೇ ಮೀಸಲಿಟ್ಟವರು. ಚೆನ್ನಕ್ಕನವರೊಂದಿಗೆ ಕರ್ನಾಟಕದ ಭಾಗೀರಥೀ ಪ್ರಭು, ಮೀರಾತಾಯಿ ಕೊಪ್ಪೀಕರ್ ಮತ್ತು ಲಕ್ಷ್ಮಿ.

ಈ ನಾಲ್ವರೂ 1959 ಮಾರ್ಚ್ 25 ಪೌನಾರದಲ್ಲಿ ಸ್ಥಾಪನೆಯಾದ 'ಬ್ರಹ್ಮವಿದ್ಯಾಮಂದಿರ'ದಲ್ಲಿ ನೆಲೆನಿಂತು ಅಲ್ಲಿಂದಲೇ ಸೇವಾಕಾರ್ಯಗಳಿಗೆ ತಮ್ಮನ್ನು ತೊಡಗಿಸಿಕೊಳ್ಳತೊಡಗಿದರು. ಚೆನ್ನಕ್ಕ ವಿದೇಶಗಳಿಗೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡರು. ವಿನೋಬಾಜಿ ಹೇಳಿದ ಮಾತಿನಂತೆ- ''ಪಾದಯಾತ್ರೆ ಮಾಡ್ರಿ, ವಾಹನ ಉಪಯೋಗ ಮಾಡಬೇಡಿ, ನಿಮ್ಮ ಸಂಗ ಪುರುಷರಿರೋದು ಬೇಡ. ಅವರಿದ್ದಲ್ಲಿ ಸ್ತ್ರೀ

ಶಕ್ತಿ ಕುಂದತದ, ನೀವು ಸ್ತ್ರೀಯರೇ ಸ್ವಾವಲಂಬನೆಯಾಗಿರಿ'' -ಕರ್ನಾಟಕದಲ್ಲಿ, ಕಾರವಾರ, ಬಿಜಾಪುರ, ಬೆಳಗಾಂ, ಧಾರವಾಡಗಳಲ್ಲಿ ಕಾಲ್ನಡಿಗೆಯಲ್ಲಿ ಸುತ್ತಾಡಿ ಸೇವೆ ಮಾಡಿದ್ವಿ' ಎನ್ನುತ್ತಾರೆ.

**ಆಶ್ರಮದ ಉದ್ದೇಶ** : ಸ್ವಾವಲಂಬನ, ಸಾಮೂಹಿಕ ಜೀವನ, ಶ್ರಮನಿಷ್ಠ ಜೀವನ, ಅಲ್ಲಿ ಎಲ್ಲರೂ ಸಮಾನರೂ, ಹಿಂದೂಸ್ಥಾನದ ಎಲ್ಲಾ ಪ್ರಾಂತ್ಯದ ಜನರೊಂದಿಗೆ ವಿದೇಶದವರೂ ಅಲ್ಲಿದ್ದಾರೆ. ವಿನೋಬಾಜಿ ಕನಸಿನಂತೆ ವಿಶ್ವದ ಸಾಮೂಹಿಕ ಜೀವನ ನಡಿತಾನೇ ಇದೆ.

''ವಿನೋಬಾಜಿ ಯಾವಾಗಲೂ ಹೇಳುತ್ತಿದ್ದುದು : 'ಸ್ತ್ರೀಸಮಾಜದ ಉದ್ಧಾರವಾಗಬೇಕಾದ್ರೆ ಕಾಶ್ಮೀರದ ಲಲ್ಲಾ, ರಾಜಾಸ್ಥಾನದ ಮೀರಾ, ಮಹಾರಾಷ್ಟ್ರದ ಮುಕ್ತಾ, ಕರ್ನಾಟಕದ ಅಕ್ಕಮಹಾದೇವಿ, ತಮಿಳುನಾಡಿನ ಆಂಡಾಳ್ -ಇಂಥ ವೈರಾಗ್ಯಶೀಲ ಮಹಿಳೆಯರು ಹಿಂದೂಸ್ಥಾನಕ್ಕೆ ಬೇಕಾಗಿದ್ದಾರೆ. ಇಂಥವರು ಈ ಆಶ್ರಮದಲ್ಲಿ ಬೆಳೀಬೇಕು' -ಅವರ ಮಾತುಗಳೇ ನಮ್ಮನ್ನು ಬೆಳೆಸಿದವು. ಹಾಗೇ ನಮ್ಮ ಧೈರ್ಯ ನೀಡಿದ್ದು ಅಕ್ಕಮಹಾದೇವಿ ಮತ್ತು ಆಕೆಯ ವಚನಗಳು'' ಎಂದು ಹಳೆಯದನ್ನೆಲ್ಲ ಮೆಲುಕು ಹಾಕುತ್ತಾರೆ ಚೆನ್ನಕ್ಕ. ಹೋದಲ್ಲೆಲ್ಲ ಅಕ್ಕನ ದಿಟ್ಟತನವನ್ನು ಸಾರಿದ್ದಲ್ಲದೆ, ಅದನ್ನ ಹೆಣ್ಣುಮಕ್ಕಳೆಲ್ಲ ಮೈಗೂಡಿಸಿಕೊಳ್ಳಬೇಕೆಂದ ಚನ್ನಕ್ಕ ವಚನಗಳನ್ನು ಚೆನ್ನಾಗಿ ಹಾಡುತ್ತಾರೆ ಕೂಡ. ಇದು ಜನರನ್ನು ಸೇರಿಸುವ ತಂತ್ರವೂ ಆಗಿತ್ತಾಗ!

ಚೆನ್ನಕ್ಕನವರಿಗೆ ಸಂಗೀತ ಬಲು ಪ್ರಿಯ. ಶಾಸ್ತ್ರೀಯವಾಗಿ ಕಲಿಯಲು ಪಾಡುಪಟ್ಟು ಕೊನೆಗೆ ಕೈಬಿಟ್ಟವರು. ಇದು ವಿನೋಬಾಜಿಗೂ ಇಷ್ಟವಿರಲಿಲ್ಲ. ಒಂದು ವೇಳೆ ಅವರು ಒಪ್ಪಿದ್ದರೆ ನಾನೀಗ ಸಮಾಜ ಸೇವಕಿಯಾಗುವ ಬದಲು ದೊಡ್ಡ ಸಂಗೀತ-ಗಾರಳಾಗುತ್ತಿದ್ದೆ! ಆಗ ನನ್ನ ಬದುಕಿನ ದಿಕ್ಕೇ ಬದಲಾಗುತ್ತಿತ್ತು. ಸದ್ಯ! ವಿನೋಬಾಜಿ ತಡೆದದ್ದು ಒಳ್ಳೆಯದೇ ಆಯಿತೆನ್ನುತ್ತಾರೆ.

ಚೆನ್ನಕ್ಕನವರ ವಿಶೇಷವೆಂದರೆ, ಅವರ ಹಠಮಾರಿತನ. ಅಂದು-ಕೊಂಡಿದ್ದನ್ನು ಸಾಧಿಸಿಯೇ ತೀರಬೇಕು. ಅದಕ್ಕೆ ಉದಾಹರಣೆಯಾಗಿ ಅವರ ಬದುಕಿನ ಒಂದು ಪ್ರಸಂಗವನ್ನು ನೋಡಬಹುದು. ಆಗಿನ್ನೂ ಸ್ವಾತಂತ್ರ್ಯ ಸಿಕ್ಕಿರಲಿಲ್ಲ. ಕಸ್ತೂರಿಬಾ ಕೇಂದ್ರದಲ್ಲಿದ್ದಾಗ ಸರಿಯಾಗಿ ಕನ್ನಡದ ಅಕ್ಷರ ಜ್ಞಾನವೇ ಇರದ ಹುಡುಗಿ ಮೊದಲಿಗೆ ಕಲಿಯ ಹೊರಟಿದ್ದು ಇಂಗ್ಲಿಷನ್ನು! ಇದು ಆ ಕೇಂದ್ರದ ಮೇಲ್ವಿಚಾರಕರಿಗೆ ತಿಳಿದು ಕೆಂಡಾಮಂಡಲವಾಗಿ ಆ ಹುಡುಗಿಯನ್ನು ಕರೆಸಿ ಖಾರವಾಗೇ ಪ್ರಶ್ನಿಸಿದರು: 'ನೀನೇನು ಇಂಗ್ಲಿಷ್ ಕಲಿತು ಇಂಗ್ಲೆಂಡಿಗೆ ಹೋಗಬೇಕಾಗಿದ್ಯೇನು?' ಈ ಪ್ರಶ್ನೆಯೇ ನಡುಗುತ್ತ ನಿಂತಿದ್ದ ಹುಡುಗಿಯ ಮನಸ್ಸಿನಲ್ಲಿ ಬೇರೂರಿ, ಆ ಕ್ಷಣವೇ ಪ್ರತಿಜ್ಞೆ ಮಾಡಿಯಾಯಿತು. ಜೀವನದಲ್ಲಿ ಒಮ್ಮೆಯಾದರೂ 'ಆ ಇಂಗ್ಲೆಂಡಿಗೆ' ಹೋಗಿಯೇ ತೀರುತ್ತೇನೆಂದು. ಆಗ ಪಾಪ, ಇಂಗ್ಲೆಂಡ್ ಕೂಡ ಪಕ್ಕದ ಯಾವುದೋ ಒಂದು ಊರಿರಬೇಕೆಂದು ಭಾವಿಸಿತ್ತು ಆ ಹುಡುಗಿ! ಇಂಗ್ಲಿಷ್ ಕಲಿಕೆಯಂತೂ ಅಲ್ಲಿಗೇ ಮುಕ್ತಾಯವಾಯಿತು. ಕನ್ನಡ-ಹಿಂದಿ ಭಾಷೆಗಳನ್ನು ಚೆನ್ನಾಗಿ ಕಲಿತ ಇವರು ಸಂಸ್ಕೃತ, ಮರಾಠಿ, ಬಂಗಾಳಿ, ಗುಜರಾತಿ, ಅಸ್ಸಾಮಿ ಭಾಷೆಗಳನ್ನು ಅರ್ಥಮಾಡಿಕೊಳ್ಳುವ ಇವರ ಹತ್ತಿರ ಕೊನೆಗೂ ಇಂಗ್ಲಿಷ್ ಸುಳಿಯಲೇ ಇಲ್ಲ! ಅವರು ಅಂದುಕೊಂಡಂತೆ ಇಂಗ್ಲೆಂಡ್‌ಗಂತೂ ಹೋಗಿಬಂದರು. (ಹೋಗುವ ಮೊದಲು ಅದಕ್ಕೆ ಕಾರಣರಾದವರ ಆಶೀರ್ವಾದ ಪಡೆದೇ ಹೋದರು) ಅಷ್ಟೇ ಅಲ್ಲ ಸರ್ವೋದಯದ ಪ್ರಚಾರಕ್ಕಾಗಿ ಇನ್ನೂ 15 ರಾಷ್ಟ್ರಗಳಿಗೂ ಹೋಗಿ ಬಂದಿದ್ದಾರೆ. (ಫ್ರಾನ್ಸ್, ಜರ್ಮನಿ, ಸ್ವಿಡ್ಜರ್‌ಲ್ಯಾಂಡ್, ಅಮೆರಿಕ, ಸ್ವೀಡನ್, ನಾರ್ವೆ, ಬರ್ಲಿನ್, ಕೆನಡಾ, ಇಂಡೋನೇಷಿಯಾ, ಸಿಂಗಪೂರ್ ಇತ್ಯಾದಿ) ಹಿಂದೂಸ್ಥಾನದ ಮೂಲೆ ಮೂಲೆಗೂ ತಿರುಗಿ ಸ್ತ್ರೀಜಾಗೃತಿ ಶಿಬಿರ, ಗೋರಕ್ಷಣೆ, ದೇವನಾಗರಿ ಲಿಪಿ ಪ್ರಚಾರ ಮಾಡಿದ್ದಾರೆ.

ಈ ದೇವನಾಗರಿ ಲಿಪಿ ಭಾರತದ ರಾಷ್ಟ್ರೀಯ ಲಿಪಿಯಾಗಬೇಕೆಂದು ಬಯಸಿ (ಇದು ವಿನೋಬಾರ ಕನಸಾಗಿತ್ತು) 27 ವರ್ಷಗಳಿಂದ ಸತತವಾಗಿ ದೇವನಾಗರಿ ಲಿಪಿಯ ಪತ್ರಿಕೆಯನ್ನು ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಹೊರಡಿಸಿ ಅದರ ಮೂಲಕವೂ ಗಾಂಧೀ-ವಿನೋಬಾರ ವಿಚಾರಗಳನ್ನು ಪ್ರಚಾರ ಮಾಡುತ್ತಿದ್ದಾರೆ. ಕರ್ನಾಟಕದಲ್ಲೂ 25 ವರ್ಷಗಳಿಂದ 'ಕನ್ನಡ ದೇವನಾಗರೀ ಲಿಪಿ' ಪತ್ರಿಕೆ (ಕನ್ನಡ ಭಾಷಾ, ದೇವನಾಗರೀ ಲಿಪಿ) ಮೊದಲು ಕರ್ನಾಟಕದಲ್ಲೇ ಆರಂಭವಾಗಿ ಆರ್ಥಿಕ ಮುಗ್ಗಟ್ಟಿನಿಂದಾಗಿ ನಿಂತು, ನಂತರ ಪೌನಾರದಿಂದ 30 ವರ್ಷ ಹೊರಟು, ಈಗ ಕರ್ನಾಟಕದ ಮುಧೋಳದಿಂದಲೇ ಹೊರ-ಬರುತ್ತಿದೆ. ಇದಕ್ಕಾಗಿ ಇವರಿಗೆ ದೇವನಾಗರಿ ಪರಿಷತ್ ಸಂಸ್ಥೆ 'ವಿನೋಬಾ ಪ್ರಶಸ್ತಿ' (1995) ಕೊಟ್ಟು ಗೌರವಿಸಿದೆ. ಅಷ್ಟೇ ಅಲ್ಲದೆ, ವಿನೋಬಾಜಿಯವರ ಜನ್ಮಶತಾಬ್ದಿ ಅಂಗವಾಗಿ ಕನ್ನಡದಲ್ಲಿ ವಿನೋಬಾರ ವಿಚಾರವಾಗಿ 'ಅಹಿಂಸಾ ಶೋಧನೆ' ಪುಸ್ತಕವನ್ನು ಸಾಕಷ್ಟು ಶ್ರಮ ಪಟ್ಟು, ನಷ್ಟ ಅನುಭವಿಸಿ ಪ್ರಕಾಶಿಸಿದರು. 'ಹಾಕಿದ ಹಣ ವಾಪಸ್ ಬರದಿದ್ದರೂ ಚಿಂತಿಲ್ಲ. ಸಾಕಷ್ಟು ಜನರಿಗೆ ವಿನೋಬಾರ ವಿಚಾರ ತಿಳೀತದಲ್ಲ ಅಷ್ಟು ಸಾಕು' ಎಂದು ತೃಪ್ತಿಪಟ್ಟುಕೊಳ್ಳುವ ಜೀವ ಅವರದು. 'ಮೈತ್ರಿ' ಎಂಬ ಹಿಂದಿ ಮಾಸ ಪತ್ರಿಕೆಯೊಂದಕ್ಕೆ ಸುಮಾರು 30 ವರ್ಷಗಳಿಂದಲೂ ಸ್ವತಃ ಪ್ರಕಾಶಕರಾಗಿದ್ದಾರೆ. ಒಬ್ಬೊಂಟಿಯಾಗಿ ಸಾಕಷ್ಟು ಸಾಧಿಸಿದ್ದರೂ ಅವರು ಮಾತನಾಡುವಾಗ 'ನಾನು' ತಲೆಹಾಕದೆ 'ನಾವು' ಎನ್ನುವುದೇ ಅವರ ದೊಡ್ಡಗುಣ.

ಇತರರ ಸುಳ್ಳು ಹೇಳುವ ಮತ್ತು ನಂಬಿಸಿ ಮೋಸ ಮಾಡುವ ಗುಣ ತನಗಾಗದೆಂದು ಹೇಳುತ್ತಲೇ ಯಾರನ್ನೂ ಅನುಮಾನಿಸದ, ಬೆಳ್ಳಗಿರುವುದೆಲ್ಲ ಹಾಲೆಂದು ನಂಬುವ ಇವರು ಅನೇಕ ಸಲ ಮೋಸ

*17ನೇ ಪುಟಕ್ಕೆ...*

# ಕಮಲಾದೇವಿ ಚಟ್ಟೋಪಾಧ್ಯಾಯ

## (1903- 1988)

-ಡಾ/ ಜ್ಯೋತ್ಸ್ನಾ ಕಾಮತ್

'ನಿನ್ನ ಮಗಳು ನನ್ನ ಮಗಳನ್ನು ಕೊಂದೇ ಬಿಟ್ಟಳು!' ಉದ್ವೇಗ ಪೂರ್ಣನಾಗಿ ಮನೆಯೊಳಗೆ ನುಗ್ಗಿ ಕೈಯೊಳಗಿನ ವೃತ್ತಪತ್ರಿಕೆ ಬೀಸುತ್ತ ಬಂದ ಸೋದರ ಸಂಬಂಧಿಯನ್ನು ಕಂಡು ಗಿರಿಜಾಬಾಯಿ ಹೌಹಾರಿದಳು. ''ನೋಡು ಈ ಅವಾಂತರ!'' ಮುನ್ನಾದಿನ ನಗರದಲ್ಲಿ ನಡೆದ ಉಸ್ತಾದ್ ಅಬ್ದುಲ್ ಕರೀಂಖಾನರ ಕಚೇರಿಯಲ್ಲಿ ಪಕ್ಕಪಕ್ಕದಲ್ಲಿ ಕಮಲಾ, ಹಾಗೂ ಆತನ ಮಗಳು ಕುಳಿತು ಸಂಗೀತ ಕೇಳುತ್ತಿದ್ದ ಚಿತ್ರವೊಂದು ಆ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ''ನಿನ್ನ ಮಗಳು ನಾಟಕ, ಸಂಗೀತ ಎಂದು ಲಂಗುಲಗಾಮಿಲ್ಲದೇ ವರ್ತಿಸಿ, ಈಗ ಅವಳೊಂದಿಗೆ ಸಾರ್ವಜನಿಕ ಸಭೆಯಲ್ಲಿ ಸಂಗೀತ ಕೇಳಲು ಕುಳಿತ 'ಚರಿತ್ರಹೀನತೆ'ಗಾಗಿ, ನನ್ನ ಮಗಳ ಗಂಡ-ಅತ್ತೆ ಮನೆಯವರು, ಅವಳನ್ನು ಬಿಟ್ಟುಬಿಡಲು ನಿರ್ಧರಿಸಿದ್ದಾರೆ!' ಆ ಸಂಬಂಧಿ ಕುಸಿದು ತಲೆಯ ಮೇಲೆ ಕೈ ಹೊತ್ತು ಕುಳಿತ. 1899ರಷ್ಟು ಹಿಂದಿನಿಂದಲೇ ಸ್ತ್ರೀಶಿಕ್ಷಣ, ಸಮಾಜ ಸುಧಾರಣೆಗಳಲ್ಲಿ ಒಂದಿಲ್ಲೊಂದು ವಿಧದಲ್ಲಿ ತೊಡಗಿಕೊಂಡಿದ್ದ ಗಿರಿಜಾಬಾಯಿಗೆ ನಿಂದೆ, ತಿರಸ್ಕಾರಗಳು ದಿನದ ಮಾತಾಗಿದ್ದರೂ ಈ ವಜ್ರಾಘಾತಕ್ಕೆ ಆಕೆ ಸಿದ್ಧಳಿರಲಿಲ್ಲ. ಆ ಕೂಡಲೇ ಮಗಳು ಕಮಲಾಳನ್ನು ಅವಳ ವಿದ್ಯಾಭ್ಯಾಸಕ್ಕಾಗುತ್ತಿದ್ದ ಅಡಚಣೆಯನ್ನೂ ಗಮನಿಸದೇ ಇಂಗ್ಲೆಂಡಿನಲ್ಲಿ ಓದುತ್ತಿದ್ದ ಪತಿಯ ಬಳಿ ಕಳಿಸಿಬಿಟ್ಟಳು. ಈ ಶತಕದ ಇಪ್ಪತ್ತನೆಯ ದಶಕದ ಮೊದಲ ದಿನಗಳಾಗಿದ್ದವು ಅವು.

★ ★ ★

ಶ್ರೀ ಅನಂತಯ್ಯ ಹಾಗೂ ಗಿರಿಜಾಬಾಯಿ ಧಾರೇಶ್ವರ ದಂಪತಿಗಳ ನಾಲ್ಕು ಮಕ್ಕಳಲ್ಲಿ ಕೊನೆಯವಳಾಗಿ 1903ರಲ್ಲಿ ಮಂಗಳೂರಿನಲ್ಲಿ, ಹುಟ್ಟಿದ ಕಮಲಾ, ಅತ್ಯಂತ ಸುಸಂಸ್ಕೃತ ವಾತಾವರಣದಲ್ಲಿ ಬೆಳೆದರು. ತಂದೆಯವರು ಅಂದಿನ ಪ್ರತಿಷ್ಠಿತ ಹುದ್ದೆಯಾಗಿದ್ದ ಕಲೆಕ್ಟರ (ಡಿಸಿ) ಪದವಿಗೂ ಏರಿದ್ದರು. ತಾಯಿ, ಅಜ್ಜಿ ವಿದ್ಯಾವತಿಯರು. ಸಮಾಜಸೇವೆಯಲ್ಲಿ ತಾಯಿಯದು ಮೀರಿದ ಆಸಕ್ತಿ; ಮಹಿಳಾ ಸಮಾಜ ಕಟ್ಟಿದ ಮೊದಲಿಗರೆಂದು ಗುರುತಿಸಲ್ಪಟ್ಟವರು. ಅಜ್ಜಿ ಸಂಸ್ಕೃತ ಧಾರ್ಮಿಕ ಗ್ರಂಥಗಳನ್ನು ಓದುವುದೇ ಅಲ್ಲದೇ, ಪಂಡಿತರನ್ನು ಆಗಾಗ ಮನೆಗೆ ಆಮಂತ್ರಿಸಿ, ವ್ಯಾಖ್ಯಾನ-ಚರ್ಚೆಗಳನ್ನು ಏರ್ಪಡಿಸಿ ಸ್ವತಃ ಪಾಲುಗೊಳ್ಳುತ್ತಿದ್ದರು. ಏಕಾಕಿಯಾಗಿ ದೂರದ ಊರುಗಳಲ್ಲಿ ಓಡಾಡುತ್ತಿದ್ದರು. ಜನರ ಟೀಕೆ-ಟಿಪ್ಪಣಿಗಳಿಗೆ ಸೊಪ್ಪು ಹಾಕುವವರಲ್ಲ. ಮನೆಯಲ್ಲಿದ್ದು ಓದುವ ಸಂಬಂಧಿಕರ ಮಕ್ಕಳ ದೊಡ್ಡ ಪಡೆಯೇ ಇತ್ತು. ಅವರೆಲ್ಲರ ಊಟ-ಉಡಿಗೆಯಷ್ಟೆ ಅಲ್ಲದೇ ಓದಿನ ಮೇಲ್ವಿಚಾರಣೆ ಗಿರಿಜಾಬಾಯಿಯದು. ಕಮಲಾ ಇನ್ನೂ ತೀರ ಚಿಕ್ಕ ಬಾಲಿಕೆಯಿದ್ದಾಗಲೇ ತಂದೆಯ ಆಕಸ್ಮಿಕ ನಿಧನದಿಂದ ಕುಟುಂಬದ ವ್ಯವಸ್ಥೆ ಏರು ಪೇರಾಯಿತು. ಆಸ್ತಿಯ ವಹಿವಾಟಿನಲ್ಲಿ ಮಹಿಳೆಯ ಅಭಿಪ್ರಾಯಕ್ಕೆ ಬೆಲೆ ಕೊಡದ ದಿನಗಳು. ಒಮ್ಮಿಂದೊಮ್ಮೆ ಕುಸಿದ ಆರ್ಥಿಕ ವ್ಯವಸ್ಥೆಯಲ್ಲೂ ಕಂಗೆಡದೆ ಮಕ್ಕಳ ಓದನ್ನು ಮುಂದು-ವರಿಯುವಂತೆ ನೋಡಿಕೊಂಡರೂ, ಬಾಲ್ಯವಿವಾಹ ವ್ಯವಸ್ಥೆಯನ್ನು ವಿರೋಧಿಸಿದರೂ ಸ್ವತಃ ಮಗಳ ಕಿರಿಯ ಪ್ರಾಯದ ಮದುವೆಯನ್ನು ವಿರೋಧಿಸುವ ಮನೋಬಲ, ಗಿರಿಜಾಬಾಯಿಯಲ್ಲಿ ಉಳಿದಿರಲಿಲ್ಲ. ಪರಿಣಾಮವೆಂದರೆ ಪತ್ನಿಯ ಸ್ಥಾನಮಾನ ಏನೆಂದು ಅರಿಯುವ ಮೊದಲೇ ಮುದ್ದಿನಮಗಳು, ಕಮಲಾ ವಿಧವೆಯಾದದ್ದು!

ಇನ್ನು ಉಳಿದ ಮಾರ್ಗ ಒಂದೇ. ಮಗಳನ್ನು ಓದಿಸಿ ಸ್ವಾವಲಂಬಿಯಾಗಿಸುವುದು. ಮಂಗಳೂರಿನ ಸಂಪ್ರದಾಯವಂತರ ನಿಂದೆಯಿಂದ ದೂರವಿರಲು ಮದ್ರಾಸಿನಲ್ಲಿ ಬಿಡಾರ ಮಾಡಿದರು. ಆದಾಗಲೇ ಸಂಗೀತ, ಅಭಿನಯ, ಡಿಬೇಟಿಂಗ್‌ಗಳಲ್ಲಿ ಹೆಸರು ಮಾಡಿದ ಕಮಲಾಳ ಪ್ರತಿಭೆ ಅರಳಲು ಅಲ್ಲಿಯ ವಾತಾವರಣ ಸಹಾಯಕ-ವಾಯಿತು. ಸಾವಿರಾರು ಜನರಲ್ಲಿ ಎದ್ದು ಕಾಣುವ ರೂಪ-ಮೈಬಣ್ಣ-ಮೈಮಾಟದ ಕಮಲಾ ಓದಿನಲ್ಲಿಯೂ ಮುಂದಾಗಿದ್ದರು.

ಭಾರತ ಕೋಗಿಲೆ ಸರೋಜಿನಿ ನಾಯ್ಡು ಅವರ ಸೋದರ ಸ್ವತಃ ಕವಿ-ನಟ-ನಾಟಕಕಾರನೆಂದು ಆದಾಗಲೇ ಹೆಸರುವಾಸಿಯಾಗಿದ್ದ ತರುಣ ಹರೀಂದ್ರನಾಥ ಚಟ್ಟೋಪಾಧ್ಯಾಯರು ಸಾಂಸ್ಕೃತಿಕ ಕಾರ್ಯಕ್ರಮವೊಂದರಲ್ಲಿ ಕಮಲಾದೇವಿಯನ್ನು ಕಂಡು ಆಕರ್ಷಿತ-ರಾದರು. ಮದುವೆಯಾಗುವುದಿದ್ದರೆ ಅವಳನ್ನೇ, ಎಂದು ನಿರ್ಧರಿಸಿ ಬಿಟ್ಟರು. ಸರಿ, ಸಂಧಾನ, ಅನುಸಂಧಾನಗಳು ಪ್ರಾರಂಭವಾದವು. ಕಮಲಾರಿಗೂ ಅವರ ಕವಿತಾಶಕ್ತಿ ಅಭಿನಯ ಕೌಶಲ್ಯಗಳು ಮೆಚ್ಚಿಗೆ ಆದವು. ಭಾಷೆ, ಜಾತಿ, ಪ್ರದೇಶಗಳ ಭಿನ್ನತೆ ಬಾಧಿಸದಿದ್ದರೂ ಈ ಪ್ರತಿಭಾವಂತನ ವೈಚಾರಿಕ ಪ್ರೌಢಿಮೆ, ಸ್ಥಿರಬುದ್ಧಿಯ ಕುರಿತು ತಾಯಿ-ಮಗಳಿಗೆ ಸಂದೇಹ ಇದ್ದೇ ಇದ್ದವು. ಒಬ್ಬರಿಗಾಗಿ ಇನ್ನೊಬ್ಬರು ಹೇಳಿ ಮಾಡಿಸಿದ ಜೋಡಿ ! ರೂಪ, ಪ್ರತಿಭೆ, ಒಲವು, ಕೌಟುಂಬಿಕ ಹಿನ್ನೆಲೆಗಳಲ್ಲಿ !' ಎಂದು ಪರಿಚಿತರ ಒತ್ತಡ, ವರನ ಪೂರ್ಣ, ತಯಾರಿ, ವಧುವಿನ ಅರೆ ತಯಾರಿಗಳ ನಡುವೆ ಸಿವಿಲ್ ರೀತಿಯ ಮದುವೆ ನಡೆದೇ ಹೋಯಿತು ! ಮುಂದಿನ ಓದಿಗೆ ಹರೀಂದ್ರ-ನಾಥರು ಆ ಕೂಡಲೇ ಆಕ್ಸ್‌ಫರ್ಡಿಗೆ ತೆರಳಿದರು. ಭಾರತದಲ್ಲಿದ್ದು ತನ್ನ ಓದನ್ನು ಮುಂದುವರಿಸಿದರು, ಕಮಲಾದೇವಿ.

ಅದಾಗಲೇ ವಿಮೆನ್ಸ್ ಕಾನ್‌ಫರೆನ್ಸ್ ಕಟ್ಟಿದ ಮಾರ್ಗರೇಟ್ ಕಸಿನ್ಸ್ ಅವರ ಪ್ರಭಾವ ತರುಣಿ ಕಮಲಾದೇವಿಯ ಮೇಲೆ ಸಾಕಷ್ಟಿತ್ತು. ಅವರಿಂದ ಪಾಶ್ಚಾತ್ಯ ಸಂಗೀತ ಕಲಿತರು. ಚಿತ್ರಕಲೆ ಅಭ್ಯಸಿಸಿದರು. ಮಹಿಳೆಯರ ಅಭ್ಯುದಯಕ್ಕಾಗಿ ಅವಿರತವಾಗಿ ಹೆಣಗುತ್ತಿದ್ದ ಮಾರ್ಗರೇಟ್ ತಮ್ಮೆಲ್ಲ ಚಟುವಟಿಕೆಗಳಲ್ಲಿ ಬಾಲ್ಯದಿಂದಲೇ ಕಮಲಾದೇವಿಯನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ತಾಯಿ ಗಿರಿಜಾಬಾಯಿಯವರೂ ಬೆಂಬಲಕ್ಕಿದ್ದು ಕಮಲಾದೇವಿ ಮುಂದೆ ಮಹಿಳೆಯರ ಅಭ್ಯುದಯವನ್ನೇ ಜೀವನದ ಗುರಿಯಾಗಿಟ್ಟುಕೊಂಡು ಸರ್ವವಿಧದಲ್ಲಿ ಶ್ರಮಿಸಿದರು. ಆದರೆ ಅದು, ಅವರು ಹಲವಾರು ವಿಧದಲ್ಲಿ ಕೈಕೊಂಡ ಸಾರ್ವಜನಿಕ ಸೇವಾವಿಧಾನಗಳಲ್ಲಿ ಒಂದಾಗಿತ್ತು. ಚಿಕ್ಕಂದಿನ ತರಬೇತಿ ಅವರಿಗೆ ಕೊನೆವರೆಗೆ ಸಹಾಯ ನೀಡಿತು. ಸಂಗೀತ-ನೃತ್ಯ-ನಾಟಕಗಳ ಪ್ರೀತಿ ಬೆಳೆಯುತ್ತ ಹೋಯಿತು. ಆದರೆ ಪ್ರಾರಂಭದಲ್ಲಿ ಲಲಿತ ಕಲೆಗಳ ಆಸಕ್ತಿಯೇ ಸಂಪ್ರದಾಯವಂತರ ಕೆಂಗಣ್ಣಿಗೂ ಕಾರಣವಾಯ್ತು.

★ ★ ★

ಪ್ರಾರಂಭದಲ್ಲಿ ಕಾಣಿಸಿದ ಘಟನೆಯ ಬಳಿಕ ಇಂಗ್ಲೆಂಡಿನಲ್ಲಿ ಕಮಲಾ-ಹರೀಂದ್ರರ ಅಭಿನಯಾಸಕ್ತಿಗೆ ಹೊಸ ಆಯಾಮಗಳು ದೊರೆತವು. ಆದರೆ ಕಮಲಾದೇವಿಯ ಶಿಕ್ಷಣ ಮುಂದುವರಿಯಲಿಲ್ಲ. ಹರೀಂದ್ರರ ಹಿರಿಯ ಸೋದರ ವೀರೇಂದ್ರ ಚಟ್ಟೋಪಾಧ್ಯಾಯರು ಉಗ್ರರಾಷ್ಟ್ರೀಯತೆಯ ನಿಲುವಿಗಾಗಿ ಕರೇಪಟ್ಟಿ (ಬ್ಲ್ಯಾಕ್‌ಲಿಸ್ಟಿ-ನಲ್ಲಿ)ಯ ಆರೋಪಿಯಾಗಿದ್ದರು. ಭಾರತಕ್ಕೆ ಬಂದರೆ ಗಲ್ಲು ಅಥವಾ ಕಾಲಾಪಾನಿ ನಿಶ್ಚಿತವಾಗಿದ್ದರಿಂದ ಅವರು ಯುರೋಪಿನ ಮುಖ್ಯ-ವಾಗಿ ಫ್ರಾನ್ಸಿನ ನಿವಾಸಿಯಾಗಿ ಮುಂದುವರಿದಿದ್ದರು. ಆ ಕುಟುಂಬ-ದವರೆಲ್ಲ ರಾಷ್ಟ್ರೀಯ ಚಳುವಳಿಯಲ್ಲಿ ಇದ್ದವರಾದ್ದರಿಂದ ಕಮಲಾಗೆ ಯಾವ ಶಿಕ್ಷಣ ಸಂಸ್ಥೆಯಲ್ಲೂ ಪ್ರವೇಶ ಸಿಗಲಿಲ್ಲ. ಆದರೆ ಇಂಗ್ಲೆಂಡಿನ ಆಧುನಿಕ ರಂಗ, ಹೊಸ ತಂತ್ರಗಳನ್ನು ಅಭ್ಯಸಿಸಿದರು. ಹರೀಂದ್ರರು ನಾಟಕಗಳ ಸ್ಕ್ರಿಪ್ಟ್ ಬರೆದು ಪ್ರಸ್ತುತ ಪಡಿಸುವಲ್ಲಿ ಹೆಸರುವಾಸಿ-ಯಾದರು. ಇಬ್ಬರೂ ತಿರುಗಿ ಭಾರತಕ್ಕೆ ಬಂದರು.

ರಂಗಕ್ರಾಂತಿಯಿಂದ ಸಾಮಾಜಿಕ ಸುಧಾರಣೆಗಳತ್ತ ಜನರ ಲಕ್ಷ್ಯ ಸೆಳೆಯಲು ದಂಪತಿಗಳಿಬ್ಬರೂ ಹಲವಾರು ನಗರಗಳಲ್ಲಿ ಪ್ರದರ್ಶನ-ವಿತ್ತರು. ಜ್ವಲಂತ ಸಮಸ್ಯೆಗಳಾದ ಜಾತಿ ಭೇದ, ಅಸ್ಪೃಶ್ಯತೆ, ಬಾಲ್ಯ-ವಿವಾಹದ ಅನಿಷ್ಟ ಮುಂತಾದವು ನಾಟಕದ ಮುಖ್ಯವಸ್ತುವಾಗಿಸಿದರೆ ಭಾಷೆ ಇಂಗ್ಲಿಷ್ ಹಾಗೂ ಹಿಂದಿ. ಮುಖ್ಯಪಾತ್ರಗಳಲ್ಲಿ ಇಬ್ಬರೂ ಕಾಣಿಸಿಕೊಳ್ಳುವರು. ಸ್ಥಳೀಯ ಉತ್ಸಾಹಿಗಳಿಗೆ, ಆಸಕ್ತರಿಗೆ ಅಲ್ಪಕಾಲದ ತರಬೇತಿಯಿತ್ತು ಆ ತಂಡವನ್ನು ನಾಟಕ ಪ್ರದರ್ಶನದಲ್ಲಿ ಒಳಗೊಳ್ಳುವರು. ಕಮಲಾರ ಸಹಜಾಭಿನಯ, ಅಸಂಖ್ಯರನ್ನು ಹೊಸರಂಗಕ್ಕೆ ಆಕರ್ಷಿಸುತ್ತಿತ್ತು. ನೂತನ ಪ್ರಯೋಗಗಳಿಂದಾಗಿ ಟಾಗೋರರಿಂದ ತಲೆದೂಗಿಸಿಕೊಂಡರು. ಗಾಂಧೀಜಿಯಿಂದ ಮೆಚ್ಚಿಕೆ ಪಡೆದರು. ಟಾಗೋರರು ಸಾಹಿತ್ಯವು, ವ್ಯಕ್ತಿವಿಕಸನಕ್ಕೆ ಸಹಾಯ ಮಾಡುತ್ತದೆಂದು ದೃಢವಾಗಿ ನಂಬಿದವರು. ಗಾಂಧೀಜಿ ಕೈಗಳ ಸಫಲ ಪ್ರಯೋಗದಿಂದ ಅರ್ಥಾತ್ ಕೈಗಾರಿಕೆಯಿಂದ ವ್ಯಕ್ತಿತ್ವ ಚುರುಕು ಗೊಳ್ಳುತ್ತದೆಂದು ಸಾಧಿಸಿ ತೋರಿದವರು. ಕಮಲಾದೇವಿ ತಾನು ಎರಡನ್ನೂ ಮೈಗೂಡಿಸಿಕೊಳ್ಳಲು ಪರಿಶ್ರಮಿಸಿದ್ದನ್ನು ನಂತರದ ವರ್ಷ-ಗಳಲ್ಲಿ ನೆನೆಸಿಕೊಳ್ಳುತ್ತಿದ್ದರು. ಸಂಗೀತ ಅಭಿನಯಗಳಂತೂ ಸರಿ; ನೂಲಲು, ನೇಯಲೂ ಕಲಿತರು.

**ರಾಜಕೀಯ ಕ್ಷೇತ್ರದಲ್ಲಿ** :- ಅಂದಿನ ಯಾವ ಪ್ರಜ್ಞಾವಂತ ಮಹಿಳೆಯೂ ರಾಜಕೀಯ ಚಳುವಳಿಯಿಂದ ನಿರ್ಲಿಪ್ತವಾಗಿ ಉಳಿಯಲು ಸಾಧ್ಯವಿರಲಿಲ್ಲ. ರೌಲಟ್ ಆಕ್ಟ್, ಜಲಿಯನ್-ವಾಲಾಬಾಗ್ ದುರಂತಗಳು ತರುಣ ಜನಾಂಗವನ್ನು ರೊಚ್ಚಿ-ಗೆಬ್ಬಿಸಿದ್ದವು. ನಿಜವಾದ ಭಾರತೀಯನಿಗೆ ಸತ್ಯಾಗ್ರಹದ ಒಂದಿಲ್ಲೊಂದು ಚಟುವಟಿಕೆಯಲ್ಲಿ ಪಾಲುಗೊಳ್ಳುವುದೇ ರಾಷ್ಟ್ರಪ್ರೇಮದ ಹಾದಿ-ಯೆಂಬ ನಂಬಿಕೆ ದೃಢವಾಗಿತ್ತು. ಸರೋಜಿನಿನಾಯ್ಡು ಅವರಿಂದಾಗಿ, ಸ್ವದೇಶಿ, ಹರತಾಳ, ಸತ್ಯಾಗ್ರಹಗಳು ಕಮಲಾಗೆ ದೈನಂದಿನ ಘಟನೆ-ಗಳಾದವು. ಹಿಂದ್ ಸ್ವರಾಜ್‌ದಂತಹ ಸೌಮ್ಯ ಪುಸ್ತಕವೂ "ರಾಜದ್ರೋಹ"ದ ಮಾದರಿಯಾಗಿದ್ದಾಗ ಮನೆಮನೆಗೆ ಅದರ ಪ್ರತಿಗಳನ್ನೊಯ್ದು ಮಾರಿದರು. ಕಾಂಗ್ರೆಸ್ ಫಂಡಿಗೆ ಸಾಕಷ್ಟು ಧನ ಸಂಗ್ರಹಿಸಿದರು. ಗಾಂಧೀಜಿ 1920ರಲ್ಲಿ ಮುಂಬೈಗೆ ಬಂದಾಗ ನಡೆದ ಗಲಭೆ, ಹಿಂಸಾಚಾರ ಹಾಗೂ ಪೋಲಿಸ್ ದೌರ್ಜನ್ಯಗಳಿಗೆ ಕಮಲಾದೇವಿ ಪ್ರತ್ಯಕ್ಷದರ್ಶಿಯಾಗಿದ್ದರು. ದಬ್ಬಾಳಿಕೆಯನ್ನು ಎದುರಿಸಲು ಸಂಯಮದ ಪ್ರತಿಭಟನೆ, ಅಥವಾ ಸತ್ಯಾಗ್ರಹ ಒಂದೇ ಪರಿಣಾಮಕಾರಿಯಾದ ಉಪಾಯವೆಂದು ಮನಗಂಡರು. ಮುಂದೆ ವೈಯಕ್ತಿಕ ಸಂದರ್ಭಗಳಲ್ಲೂ ಅದನ್ನು ಕೈಕೊಂಡು ಯಶಸ್ವಿಯಾದರು. ಜೊತೆಗೆ ರಾಷ್ಟ್ರೀಯ ಸೇವಾದಳದ ಸಕ್ರಿಯ ಸದಸ್ಯರಾದರು.

1924ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿ ಅಧ್ಯಕ್ಷರಾದ ಕಾಂಗ್ರೆಸ್ ಮಹಾಧಿವೇಶನ, ಮಹಿಳಾ ಸಂಘಟನೆಯ ಅತ್ಯುತ್ತಮ ಮಾದರಿ-ಯಾಗಿ ವಿರಾಜಿಸಿತು. ಉಮಾಬಾಯಿ ಕುಂದಾಪುರ, ಕಮಲಾದೇವಿ, ಮುಂಚೂಣಿಯಲ್ಲಿದ್ದರು. ಪೊರಕೆ ಬುಟ್ಟಿ ಹಿಡಿದು ಪೆಂಡಾಲ್ ಗುಡಿಸುವ ಸ್ವಯಂ ಸೇವಕಿಯರಿಗೆ ಕಮಲಾ ನಾಯಕಿಯಾದರು. ಕ್ರಮೇಣ ಅವರ ಸಂಘಟನಾ ಸಾಮರ್ಥ್ಯದಿಂದಾಗಿ 1927ರ ಮದ್ರಾಸ್ ಅಧಿವೇಶನದಲ್ಲಿ ಸ್ಥಳೀಯ ಸೇವಾದಲದ ಮುಖ್ಯಸ್ಥೆಯಾಗಿ ಮಿಂಚಿದರು. ಆಗ ಸ್ವಯಂಸೇವಕಿಯರಿಗೆ ಬಿಳೀ ಹಾಗೂ ಕೇಸರಿ ಬಣ್ಣದ ಕಲಾತ್ಮಕ ಆಯ್ಕೆಯ ಯುನಿಫಾರ್ಮ್ ಸೀರೆಗಳ ಮಾದರಿ ಹಾಕಿದರು. ತುಂಬ ಕಾಲ ಈ ಪಡೆ 'ಆರೆಂಜ್ ಬ್ರಿಗೇಡ್' ಹೆಸರಿನಿಂದ ಪ್ರಸಿದ್ಧವಿತ್ತು.

ಮಹಿಳಾ ಸಮ್ಮೇಳನ :- ಮದ್ರಾಸ್, ಮುಂಬೈಗಳ ವಾಸದ ಬಳಿಕ ಪುಣೆಯನ್ನು ಮಹಿಳಾ ಸಮ್ಮೇಳನದ ಕೇಂದ್ರವಾಗಿ ಮಾರ್ಗರೇಟ್ ಕಸಿನ್ಸ್ ಆರಿಸಿದರು. ಅದಾಗಲೇ ಪಂಡಿತಾ ರಮಾಬಾಯಿ, ರಮಾಬಾಯಿ ರಾನಡೆ, ಮಹರ್ಷಿ ಕರ್ವೆ ಮುಂತಾದ ಮಹನಾಯಕರ ಕಾರ್ಯಕ್ಷೇತ್ರವಾದ ಪುಣೆಯಲ್ಲಿ, ಮಹಿಳಾ ಜಾಗೃತಿಯೂ ಸಾಕಷ್ಟು ಇದ್ದು, 1924ರಲ್ಲಿ ಮಹಿಳಾ ಸಮ್ಮೇಳನ (ಆಲ್ ಇಂಡಿಯಾ ವಿಮೆನ್ಸ್ ಕಾನ್‌ಫರೆನ್ಸ್)ನ ಅಧಿವೇಶನ ಕರೆಯಲಾಯಿತು. ಬಡೋದೆಯ ಮಹಾರಾಣಿ ಅಧ್ಯಕ್ಷರಾಗಿದ್ದರು. ರಾತ್ರಿ ಟ್ರೇನುಗಳಿಂದ ವಿವಿಧ ಪಟ್ಟಣಗಳಿಂದ ಬರುತ್ತಿದ್ದ ಪ್ರತಿನಿಧಿಗಳನ್ನು ಸ್ವಾಗತಿಸಿ ಅವರಿಗೆ ನಿಗದಿತವಾಗಿದ್ದ ನಿವಾಸಗಳಿಗೆ ಮುಟ್ಟಿಸುವ ಸ್ವಯಂ ಸೇವಕಿಯಾಗಿ ಕಾರ್ಯನಿರ್ವಹಿಸಲು ಕಮಲಾದೇವಿ ಸಂತೋಷದಿಂದ ಒಪ್ಪಿಕೊಂಡರು. ಸಭೆಯ ಕೊನೆಯಲ್ಲಿ ಅವರ ಮನಸ್ಸಿನ ವಿರುದ್ಧ ಸರ್ವಾನುಮತದಿಂದ ಆಯ್ಕೆಯಾದದ್ದು ಮಹಿಳಾಸಮ್ಮೇಳನದ ಜನರಲ್ ಸೆಕ್ರೆಟರಿ ಆಗಿ. ಆಮೇಲೆ ಅವರ ಅವಿರತ ದುಡಿಮೆ ಶುರುವಾಯಿತು. ದೇಶವಿಡೀ ಸಂಚರಿಸಿದರು. ಮಹಿಳಾ ಕಲ್ಯಾಣ ಕುರಿತಾದ ಸಭೆ, ಶಾಲಾ ಸ್ಥಾಪನೆ, ಮಹಿಳಾ ಕಾರ್ಮಿಕರ ಯೂನಿಯನ್ ಇತ್ಯಾದಿಗಳ ಸಂಘಟನೆಗಾಗಿ ದುಡಿದರು. ಟೈಪಿಂಗ್ ಕಲಿತು ವರದಿ ತಾವೇ ಬೆರಳಚ್ಚು ಮಾಡುವರು. ವೇಟಿಂಗ್ ರೂಮಿನ ಕಾಯುವಿಕೆ, ಪ್ರವಾಸದ ಅವಧಿಗಳು ಈ ಕೆಲಸಕ್ಕೆ ಮೀಸಲಾದವು.

ಮಹಿಳಾ ಮಿಲ್ ಕಾರ್ಮಿಕರಿಗೆ ಹೆರಿಗೆ ರಜೆಯ ಸೌಲಭ್ಯವಿರಲಿಲ್ಲ. ಆ ಅವಧಿಯಲ್ಲಿ ಅವರ ಸಂಬಳ ಕಡಿತವಾಗುತ್ತಿತ್ತು. ಮದ್ರಾಸಿನಲ್ಲಿ ಅವರ ಯೂನಿಯನ್ ಮಾಡಿ ಸಂಪು ಏರ್ಪಡಿಸಿ, ಕನಿಷ್ಠ ರಜೆ ದೊರೆಯುವಂತೆ ಮಾಡಿದರು. ಗೋಡಂಬಿ ಬೀಜ ಕಾರ್ಮಿಕರು, ಬೆಂಕಿಪೊಟ್ಟಣ ತಯಾರಕರಾದಿ ಜನಕ್ಕೆ ಕನಿಷ್ಠ ವೇತನ ದೊರೆಯುವಂತೆ ನೋಡಿಕೊಂಡರು. ಕ್ರೀಷೆಗಳು ಮೊದಲ ಬಾರಿಗೆ ದಕ್ಷಿಣ ರಾಜ್ಯದ ಮಿಲ್ಲುಗಳ ಬಳಿ ಕಾಣಿಸಿಕೊಂಡವು. ಮಂಗಳೂರಿನಲ್ಲಿ ಸಾರಿಗೆ ಕಾರ್ಮಿಕ ಯೂನಿಯನ್ ಕಟ್ಟಿದರೆ, ಬಂಗಾಲ-ಅಸ್ಸಾಮ್‌ಗಳ ಚಹ ತೋಟಗಳಲ್ಲಿ ಮಹಿಳಾ ಕಾರ್ಮಿಕರ ಶೋಷಣೆ ತಪ್ಪಿಸಲು ಹೆಣಗಾಡಿದರು.

ಈ ಕೆಲಸದಿಂದಾಗಿ ದಿಲ್ಲಿಗೆ ಹೋಗುವ ಅವಕಾಶ ಮತ್ತೆ ಮತ್ತೆ ಬರುತ್ತಿತ್ತು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರ, ಇತರ ಧುರೀಣರ ಸಂಪರ್ಕ ಬಂದು, ಎಲ್ಲೆಡೆ ಅವರು ಪರಿಚಿತರಾದರು. ಮಹಿಳಾ ಜಾಗೃತಿ, ಏಶ್ಯ, ಮಧ್ಯ ಪೂರ್ವ, ಯೂರೋಪದಲ್ಲೆಲ್ಲ ಹರಡುತ್ತಿತ್ತು. ಹಲವೆಡೆ ಮಹಿಳಾ ಸಮ್ಮೇಳನದ ಪ್ರತಿನಿಧಿಯಾಗಿ ಹೋಗಿ ಬಂದರು. ಈ ಸಂದರ್ಭದಲ್ಲಿಯೇ ಅವರಿಗೆ ಈಜಿಪ್ಟ್ ತುರ್ಕಿಸ್ತಾನ, ಇರಾನ್, ಇಥಿಯೋಪಿಯ, ಮೆಕ್ಸಿಕೋ, ಆದಿ ಅಮೇರಿಕಾ ಖಂಡದ ದೇಶಗಳ ಜಾನಪದ ಕಲೆಗಳು, ನೇಯ್ಗೆ ಹಾಗೂ ಕುಶಲ ಕೈಗಾರಿಕೆಯ ಅಪೂರ್ವ ಮಾದರಿಗಳ ಪರಿಚಯವಾಗಿ ಮುಂದೆ ಸ್ವದೇಶಕ್ಕಾಗಿ ಅವನ್ನು ಬಳಸುವ ವಿಚಾರ ಮಾಡಿದ್ದು !

ಅಸಹಕಾರ ಚಳುವಳಿ 1929ರಿಂದ ಪ್ರಾರಂಭವಾಯಿತು. ತರುಣ ಜನಾಂಗವೆಲ್ಲ ಪೂರ್ಣ ಸ್ವರಾಜ್ಯಕ್ಕಾಗಿ ಕಾತರಿಸುತ್ತಿತ್ತು ದಂಡಿಯಾತ್ರೆ, ಉಪ್ಪಿನ ಸತ್ಯಾಗ್ರಹಕ್ಕೆ ಅವಕಾಶ ಮಾಡಿಕೊಟ್ಟಿತು. ಮೊದಲಲ್ಲಿ ಮಹಿಳೆಯರನ್ನು ಈ ಚಳುವಳಿಯಲ್ಲಿ ಸೇರಿಸಿಕೊಂಡಿರಲಿಲ್ಲ. ಕೆರಳಿದ ಕಮಲಾದೇವಿ ನೇರ ಹೋಗಿ ಗಾಂಧೀಜಿಯವರನ್ನು ಕಂಡರು. ಉಪ್ಪು ತಯಾರಿಕೆಯ ಸತ್ಯಾಗ್ರಹ, ಹೆಂಗಳೆಯರಿಗೆ ಹೇಳಿ ಮಾಡಿಸಿದ ಸುಸಂಧಿಯೆಂದು ನಂಬಿಸಲು ಯತ್ನಿಸಿದರು. ಗಾಂಧೀಜಿ ಒಂದು ಹೇಳಿಕೆ ಕೊಟ್ಟರೆ, ತಾವು ಮುಂಬೈಯಲ್ಲಿ ಸತ್ಯಾಗ್ರಹ ಸಂಘಟಿಸುವುದಾಗಿ ಹೇಳಿದರು. ಗಾಂಧೀಜಿ ನಕ್ಕು ಬಿಟ್ಟರಂತೆ! ನನ್ನ ಹೇಳಿಕೆಯ ಅವಶ್ಯಕತೆಯೇ ಇಲ್ಲ. ಅವರಾಗಿ ಧುಮುಕುತ್ತಾರೆ ಎಂದರು. ಕಾರ್ಯಕಾರಿ ಸಮಿತಿಯವರು ಮಹಿಳಾ ಸೇರ್ಪಡೆಗೆ ಗಾಂಧೀಜಿ ಅನುಮತಿ ಬೇಕೇ ಬೇಕು ಎಂದದ್ದರಿಂದ ನಾಲ್ಕಾರು ಶಬ್ದಗಳ ಹೇಳಿಕೆಯನ್ನು ಬಾಪೂಜಿಯಿಂದ ಪಡೆದು ಕಮಲಾದೇವಿ ಮುಂಬೈಗೆ ಮರಳಿದರು.

ಅಲ್ಲಿ ಚೌಪಾಟಿಯಲ್ಲಿ ನೋಡುತ್ತಾರೆ, ಸಹಸ್ರಾರು ಜನ ಗಂಡಸರು ಹೆಂಗಸರು, ಮಕ್ಕಳೆನ್ನದೇ ಉಪ್ಪಿನ ತಯಾರಿಕೆ ನಡೆಸಿದ್ದರು! ಯಾರ ಅನುಮತಿಯೂ ಅವರಿಗೆ ಬೇಕಿರಲಿಲ್ಲ. ಪೊಲೀಸರು ನಿಸ್ಸಹಾಯರಾಗಿ ನೋಡುತ್ತಿದ್ದರು. ಸರಿ, ಕಮಲಾದೇವಿ ಈ ಅಕ್ರಮವಾಗಿ ತಯಾರಾದ ಉಪ್ಪನ್ನು ಮಾರುವ ಹೊಣೆ ಹೊತ್ತರು. ''ಗಾಂಧಿ ಉಪ್ಪು, ದರ ಆರು ತಿಂಗಳ ಕಾರಾವಾಸ !'' ಎಂದೇ ಘೋಷಿಸಿ ಮಾರಲಾರಂಭಿಸಿದರು. 500 ರೂಪಾಯಿಗೆ ಒಂದು ಪ್ಯಾಕೆಟ್ ಮಾರಿದರು. ಶೇರು ಬಜಾರ್, ಹೈಕೋರ್ಟ್ ಮೊದಲಾದ ಕಡೆಯೆಲ್ಲ ಮಾರಿದರು. 75,000 ರೂಪಾಯಿ ಕಾಂಗ್ರೆಸ್ ಖಜಾನೆಗೆ ಭರ್ತಿಮಾಡಿದರು. ಕೊನೆಗೆ ಬಂಧನಕ್ಕೊಳಗಾಗಿ ಆರು ತಿಂಗಳ ಜೈಲುವಾಸ ಹಾಗೂ 150 ರೂಪಾಯಿಯ ಜುಲ್ಮಾನೆಗೆ ಒಳಗಾದರು.

ಬಿಡುಗಡೆಯ ಬಳಿಕ ಸ್ವದೇಶೀ ವಸ್ತುಗಳ ಮಾರಾಟದ ಮಳಿಗೆ ಪ್ರಾರಂಭಿಸಿದರು. ಮತ್ತೆ ಪಿಕೆಟಿಂಗ್, ಅಸಹಕಾರ ಚಳುವಳಿಯಲ್ಲಿ ಪಾಲುಗೊಂಡದ್ದಕ್ಕಾಗಿ ಡಿಟೆನ್ಶನ್ ಕಾಯ್ದೆ ಪ್ರಕಾರ ವಿಚಾರಣೆಯಿಲ್ಲದೇ ಕಾರಾವಾಸದ ಶಿಕ್ಷೆಗೆ ಒಳಗಾದರು. ವೆಲ್ಲೋರ ಜೈಲಿನ ದುಸ್ಸಹ ಸೆಕೆಯ ನಡುವೆ, ಬರವಣಿಗೆಯಲ್ಲಿ ಜೈಲಿನ ಬವಣೆ ಮರೆಯಲೆತ್ನಿಸಿದರು. ಬಿಡುಗಡೆಯ ಬಳಿಕ ಅವರ ಯಾವತ್ತೂ ಜೈಲಿನ ಅನುಭವಗಳನ್ನು, ಸ್ಮೃತಿಗಳನ್ನು ಪ್ರಕಟಿಸುವುದಾಗಿ ಹೇಳಿ, ಅವರ ನಿಕಟವರ್ತಿಗಳು ಕಳೆದು ಹಾಕಿದ್ದು ದುರ್ದೈವ.

ಕಾಂಗ್ರೆಸ್ ಸೋಶ್ಯಾಲಿಸ್ಟ್ ಪಾರ್ಟಿ 1934ರ ಅಕ್ಟೋಬರದಲ್ಲಿ ಹುಟ್ಟಿಕೊಂಡಿತು. ಕಾಂಗ್ರೆಸ್ಸಿನ ಧ್ಯೇಯೋದ್ದೇಶಗಳು ಸರಿಬಾರದ, ಕಾರ್ಮಿಕ, ಕೃಷಿಕರ ಸಂಘಟನೆಗಳಿಗೆ, ಹೋರಾಟದ ಸಮಿತಿಗಳಿಗೆ, ಹೆಚ್ಚಿನ ಪಾತ್ರವನ್ನು ಅಪೇಕ್ಷಿಸಿದ ಸದಸ್ಯರೆಲ್ಲ ಅದನ್ನು ಸೇರಿದರು.